ಕನ್ನಡ ಕಾವ್ಯಮಾಲೆ—೪೪

# ನವಿಲು

ಕುವೆಂಪು



ಪ್ರಕಾಶಕರು :

ಕಾವ್ಯಾಲಯ

ಮೈಸೂರು

# ವಿವರ

# ನವಿಲು

ಜೀವನ ವನದಲಿ ಕವನ ಮಯೂರಂ,
ನಿಖಿಲ ಭುವನ ಮನ ನಯನ ವಿಹಾರಂ,
ಕಲ್ಪನೆ–ಕಣ್ಗಳ ಸಾಸಿರ ನೂರಂ
ತೆರೆದು ಕುಣಿವುದಾವೇಶದಲಿ,
ದಿನ ದಿನ ನಿಶಿ ನಿಶಿ ಮಾಯಾ ರೂಪಸಿ
ಮೆರೆಯಲು ನವ ನವ ವೇಷದಲಿ.

ತಿಮಿರದ ತೀರದಿ ಪ್ರತ್ಯುಷೆ–ಮೂರುತಿ
ಬೆಳಗೆ ದಿನೇಶಗೆ ಮಂಗಳದಾರತಿ,
ಸ್ವರ್ಣಸಲಿಲ ಸಮ ಶೀತಲ ದೀಧಿತಿ
ಶೋಭಿಸೆ ಪ್ರಾಚ್ಯದಿಗಂಗದಲಿ,
ಕುಣಿ ಓ ಮೋಹಿನಿ, ಕವನ ಕಲಾಪಿನಿ,
ಮಾನಸ ಮಾಯಾರಂಗದಲಿ.

ಖಗ ಶತ ಕೂಜನ ಮುಖರಿತ ವನದಲಿ,
ಪಲ್ಲವ ಮುದ್ರಿತ ವಿಜನವಿಪಿನದಲಿ,
ಶ್ಯಾಮಲ ಶಾಡ್ವಲ ಭುವನ ಶಯನದಲಿ
ಪೀತ ಅರುಣ ತಪನಾತಪದಿ,
ಅರ್ಧನಿಮೀಲಿತ ಅರ್ಧೋನ್ಮೀಲಿತ
ಸಂಧ್ಯಾ ತಾಪಸಿಯಿರೆ ತಪದಿ ;

ದೀರ್ಘದಿಗಂತದ ರೇಖಾ ತೋರಣ,
ನೀಲಾಕಾಶದ ಸ್ವರ್ಗಾರೋಹಣ,
ಮೃಣ್ಮಯ ಶೈಲದ ಚಿನ್ಮಯ ಧಾರಣ
ವಿರಚಿತ ರಸಲಿಪಿ ಭಿತ್ತಿಯಲಿ,
ನಿರ್ಜರ ಸಂಗಿನಿ, ಭಾವ ತರಂಗಿನಿ
ಪ್ರವಹಿಸೆ ರಸಋಷಿ ಚಿತ್ತದಲಿ ;

## ನವಿಲು

ರಿಕ್ತಗಗನದಲಿ ಪಡುವಣ ಗಾಳಿ
ಬೀಸುತ ಬರೆ ಕಾರ್ಮ್ಮುಗಿಲನು ತೇಲಿ,
ಕರಿಗಳನಟ್ಟುವ ಹರಿಯನು ಹೋಲಿ,
ವಿದ್ಯುತ್-ವಜ್ರಾಘಾತದಲಿ,
ಹರ್ಷೋತ್ಕರ್ಷಂ ಪ್ರಥಮ ಸುವರ್ಷಂ
ಸುರಿಯೆ ಅಜಸ್ರ-ಸ್ರೋತದಲಿ ;

ಇತಿ ಜೀವನ ಶತಹಾಸ ವಿಲಾಸದಿ,
ಮುಕ್ತಿಯ ಬಂಧುರ ಮಾಯಾಪಾಶದಿ
ರಚಿತ ಕಲಾಮಯ ರಾಸನಿವಾಸದಿ,
ವಿಕಸಿತ ಅಕ್ಷಿ-ಸಹಸ್ರದಲಿ
ಕುಣಿ ಓ ಮೋಹಿನಿ, ಕವನ ಕಲಾಪಿನಿ,
ಸುಂದರಲಾಸ್ಯ-ಅಜಸ್ರದಲಿ.

# ಕಬ್ಬಿಗರು

ಸವಿನುಡಿಯ ಸಿರಿಗುಡಿಯ
ಕಟ್ಟುವರು ನಾವು ;
ಹೊಂಗನಸುಗಳ ಮುಡಿಯ
ಮುಟ್ಟುವರು ನಾವು.
ಸಿಡಿಲು ಕೆಮ್ಮಿಂಚುಗಳ
ಕಡಲು ಬನ ಬಾನುಗಳ
ಒಡಹುಟ್ಟುಗಳು ನಾವು,
ಗುಟ್ಟುಗಳು ನಾವು.
ಪೊಡವಿಯನು ತಲ್ಲಣಿಪ
ಹುಚ್ಚುಗಳು ನಾವು !

ಸೊನ್ನೆಯಲಿ ಸಗ್ಗವನು
ಕೆತ್ತುವರು ನಾವು ;
ಶೂನ್ಯದಲಿ ಪೂರ್ಣತೆಯ
ಬಿತ್ತುವರು ನಾವು.
ನಮ್ಮ ಇಂದಿನ ಕನಸು
ನಿಮ್ಮ ನಾಳೆಯ ಮನಸು ;
ನಮ್ಮ ಇಂದಿನ ಹುಚ್ಚೆ
ಮುಂದೆಲ್ಲರಿಚ್ಚೆ !
ನಮ್ಮುಸಿರೊಳಿದೆ ಕಿಚ್ಚು,
ನಾವಿಳೆಯ ನೆಚ್ಚು !

ಕಬ್ಬಿಗರು ವಾಗ್ಯೆಂದ್ರ-
ಜಾಲಿಕರು ನಾವು ;
ನಮ್ಮ ನುಡಿಮಾಯೆಯಿಂ
ಬದುಕುವುದು ಸಾವು !

ಮುಸಣದಿಂ ಮೂಡುವುವು,
ಮರಳಿ ಮಾತಾಡುವುವು,
ಹಳೆಯ ವಾಣಿಗಳೆಲ್ಲ
ಯುಗ ಯುಗಗಳೆಲ್ಲ !
ಹಿಂದು ಮುಂದಿಂದುಗಳು
ಎರಡರಿವುದಿಲ್ಲ !

ಸಿರಿ ಮರಳಿ ಮೆರೆಯುವುದು
ದಶರಥನ ಪುರಿಯು ;
ಇನ್ನೊಮ್ಮೆ ಬೇಯುವುದು
ಲಂಕಾ ನಗರಿಯು !
ವಾರಿಧಿಯ ಲಂಘಿಸನು
ಮಾರುತಿಯು ಮೇಣೊಮ್ಮೆ,
ಧರಣಿಜೆಯ ದಶಶಿರನು
ಮರಳಿ ಸೆರೆಗೈದು
ಕೆಡೆಯುವುವು ಕದನದಲಿ
ತಲೆಗಳೀರೈದು !

ಸಮರದಲಿ ಭೇರಿಯನು
ಹೊಯ್ಯುವರು ನಾವು ;
ಸಂಧಿಯ ತುತೂರಿಯನು
ದನಿಗೈವರಾವು.
ಲತೆಯು ಅಸಿಯಾಗುವುದು,
ಅಸಿಯು ಲತೆಯಾಗುವುದು,
ನಾವೆಳಸಿದಂತೆಮ್ಮ
ಸವಿಯಿಚ್ಛೆಯಂತೆ !
ಮಾಡುವೆವು ಮಡಿಪುವೆವು,
ಬೊಮ್ಮಸಿವರಂತೆ !

ಖಡ್ಗಗಳಿಗೆಮ್ಮುಸಿರೆ
ಹರಿವಜ್ರಸಾಣೆ ;
ನಮ್ಮ ಲೇಖನಿಗಿಂತ
ಬರಸಿಡಿಲ ಕಾಣೆ.
ದೇಶಗಳು ತಾಗುವುವು ;
ಸೋತು ತಲೆ ಬಾಗುವುವು.
ವಿಪ್ಲವಗಳೇಳುವುವು,
ಮುಕುಟ ಬೀಳುವುವು !
ಲೇಖನಿಯೆ ಖೂರಸಿಯು,
ಕೆನ್ನೀರೆ ಮಸಿಯು !

ಆಚಾರ್ಯತನವಿಲ್ಲ
ನಮ್ಮದಾಚಾರ.
ಅಧಿಕಾರವೆಮಗಿಲ್ಲ
ನಮ್ಮದಧಿಕಾರ.
ಮೌನಿಗಳೊ ನೀವೆಲ್ಲಿ
ವಾಗ್ಮಿಗಳು ನಾವಲ್ಲಿ ;
ಗಳಪುವಿರೊ ನೀವೆಲ್ಲಿ
ಮೂಕರಾವಲ್ಲಿ !
ನಮ್ಮುಲಿಯು ತವರೂರು
ಚಿರಮೌನದಲ್ಲಿ !

ಹಿಂದು ಮುಂದುಗಳಿಲ್ಲ
ಇಂದುಗಳು ನಮಗೆ ;
ತಿರೆಯ ಕಣ್ಣುಗಳೆಲ್ಲ
ಕಣ್ಣುಗಳು ನಮಗೆ.

## ನವಿಲು

ಇಂದು ನಾಳೆಯು ಮೇಲೆ,
ನಾಳೆ ಇಂದಿನ ಮೇಲೆ
ಚೆಲ್ಲುತಿಹ ಛಾಯೆಗಳು,
ನಾವು ಮಾಯೆಗಳು!
ಕಲ್ಪಗಳು ಕವಿ ಕನಸು
ಕಡೆದ ಹಾಹೆಗಳು!

ಸಾಹಸಿಯು ಕೂರಸಿಯು
ಕಠಿನತೆಯು ನಾವು;
ಹೂವುಗಳ ಹೊಡೆಯಲ್ಲಿ
ಕೋಮಲತೆ ನಾವು.
ಚೆಲುವೆಯರ ಮೊಗದಲ್ಲಿ
ಮುಗುಳು ನಗೆಗಳು ನಾವು;
ರುದ್ರಾಗ್ನಿ ಜ್ವಾಲೆಗಳು
ಮಸಣ ಸೂಡಿನಲಿ!
ಜೀವಿಗಳ ಜೀವಗಳು
ನಾಡು ನಾಡಿನಲಿ!

ನಮ್ಮ ಕೈಬುಟ್ಟಿಯಲಿ
ಸಿಡಿಲ ಗೂಡಿಹುದು!
ಹುಡುಕಿ ನೋಡಿದರಲ್ಲಿ
ಸುಮದ ಬೀಡಿಹುದು!
ಬೈಗು ಬೆಳಗುಗಳಲ್ಲಿ;
ಬೆಳ್ದಿಂಗಳಿಹುದಲ್ಲಿ.
ಸಂಕ್ಷಿಪ್ತ ಬ್ರಹ್ಮವೈ
ನಮ್ಮ ಕೈಬುಟ್ಟಿ!
ಕಲ್ಪ ಕಲ್ಪಗಳಲ್ಲಿ
ಸಾಯುವುವು ಹುಟ್ಟಿ!

# ಸಹ್ಯಾದ್ರಿ ಶೃಂಗದಲಿ

ಮೇರೆಯರಿಯದಿಹ ನೀಲಿಯಾಗಸವ
ಮುಡಿದಿಹ ಪರ್ವತಶೃಂಗವಿದು ;
ಮಳೆಯ ಮೋಡಗಳು ಹಾರಿಬಂದಿಲ್ಲಿ
ತಾಂಡವವಾಡುವ ರಂಗವಿದು.
ಗುಡುಗು ಮಿಂಚುಗಳು ಸರಸವಾಡುತ್ತ
ಸಿಡಿಲನು ಹಡೆಯುವ ತಾಣವಿದು ;
ನೇಸರಿಂದುಗಳು ನಿಚ್ಚಪಯಣದಲಿ
ವಿಶ್ರಮಿಸುವ ನಿಲ್ದಾಣವಿದು.
ಇಲ್ಲಿ ರಾತ್ರಿಯಲಿ ಹೊಳೆವ ಚುಕ್ಕಿಗಳು
ಮಿಣು ಮಿಣುಗುವ ಕಣ್ಣೋಟದಲಿ
ಬಹವು ತಣ್ಣದಿರನೆಡಬಲಂಗಳಲಿ
ತಣಿಯೆ ಬೆಳ್ದಿಂಗಳೂಟದಲಿ.
ಚೈತ್ರಮಾಸದಲಿ ತರು ಲತಾಳಿಗಳ
ತಳಿರು ಹೂವುಗಳ ಸಿರಿ ಮೆರೆಯೆ,
ಶುಕ ಪಿಕಂಗಳಿನಿದನಿಯ ಬೀರುತ್ತ
ಭಾವುಕರ ಮೋಹಿಸುತ ಕರೆಯೆ,
ಯಕ್ಷಕಿನ್ನರರು, ರಮಣ ರಮಣಿಯರು,
ಬಹರು ಗಾನದಲಿ ಮೈಮರೆಯೆ ;
ಪ್ರಣಯ ಕೂಟಗಳ ಸರಸದಾಟಗಳ
ಸೊಗದ ಕಂಬನಿಯ ಸರಿ ಸುರಿಯೆ !
ಇಲ್ಲಿ ಮಾಗಿಯಲಿ ಬಿಳಿಯ ಮಂಜುಗಳು
ಬಂದು ಕಿಕ್ಕಿರಿದು ಕವಿಯುವುವು ;
ಇಲ್ಲಿ ಹದ್ದುಗಳು ಚೀರುತಾಗಸದಿ
ವನದ ಮೌನವನು ತಿವಿಯುವುವು.

ಇಲ್ಲಿ ಮರುದನಿಗಳುದಿಸಿಯೊಮ್ಮೊಮ್ಮೆ
ಬದುಕಿ ಬಂಡೆಗಳು ಕೂಗುವುವು ;
ಇಲ್ಲಿ ಜೀವನವೆ ಸಾವನೊಲಿದೊಮ್ಮೆ
ಜೀವ ಸಾವುಗಳು ತಾಗುವುವು.

ಬನದ ಗಾಳಿಗಳು ಕರ್ಮಬಂಧನದಿ
ಮುಕ್ತಿ ಹೊಂದುವಾಸ್ಥಾನವಿದು ;
ಕಾರ ಮೊದಲನೆಯ ತೋರ ಮಳೆಹನಿಗ-
ಳಿಳಿವ ಮೊದಲ ಸೋಪಾನವಿದು.
ಏಳು ಬಣ್ಣಗಳ ಮಳೆಯ ಬಿಲ್ಲುಗಳು
ಬಂದುಳಿವ ಕಲಾಶಾಲೆಯಿದು ;
ನವಿಲುಗಳು ಬಂದು ಗರಿಗೆದರಿ ಕುಣಿವ
ಮಳೆಯ ರಾಜನುಯ್ಯಾಲೆಯಿದು.
ಹರಿಣ ಹುಲ್ಲೆಗಳು ಹುಲಿಯು ಹಂದಿಗಳು
ಬಂದಲೆವ ಪರ್ಣಶಾಲೆಯಿದು.
ಬ್ರಹ್ಮ ಪುರುಷನಿಗೆ ಭೂಮಿದೇವಿ ತಾ-
ನರ್ಪಿಸಿದ ಕುಸುಮ ಮಾಲೆಯಿದು.

ಗೋಪ ಬಾಲಕರು ತುರುವ ಮೇಯಿಸುತ
ಬಿಸಿಲ ಬೇಗೆಯಲಿ ನೆರಳಿನಲಿ
ಕೊಳಲನೂದುವರು, ಉಲಿಯೆ ದೊಂಟೆಗಳು,
ಬಿದಿರಗಂಟೆಗಳು ಕೊರಳಿನಲಿ.
ಇರುಳು ಹಗಲುಗಳು ದಿನವು ಬಂದಿಲ್ಲಿ
ಚುಂಬಿಸೊಲಿವವು ರಹಸ್ಯದಲಿ ;
ಬೆಳಗು ಬೈಗುಗಳು ಪೂರ್ವ ಪಶ್ಚಿಮದಿ-
ನಿಣಿಕಿ ನೋಡುವುವು ಹಾಸ್ಯದಲಿ !
ಇಲ್ಲಿ ಕಬ್ಬಿಗನು ತೇಲುತ್ತೈತಂದು
ಹಾಡಿ ಕನ್ನಡದ ಕಬ್ಬವನು

## ಸಹ್ಯಾದ್ರಿ ಶೃಂಗದಲಿ

ನಚ್ಚಿನಿನಿಯಳಹ ಕವಿತೆಯೊಡಗೂಡಿ
ಬಾಳಿಗೀಯುವನು ಗಬ್ಬವನು.
ಎತ್ತನೋಡಿದರು ಸುತ್ತ ಹಸುರು ಕಡ-
ಲೊತ್ತಿ ಮುತ್ತಿಡುತಲಿಹುದಿಲ್ಲಿ ;
ಇಲ್ಲಿ ಶೃಂಗಾರವಿಲ್ಲಿ ಸೌಂದರ್‍ಯ-
ವಿಲ್ಲಿ ರಸಯೋಗ ಸುಖವಿಲ್ಲಿ !
ಹಸುರು ಹುಲ್ಲಿನಲಿ ಮೊಲಗಳೈತಂದು
ಚನ್ನೆಯಾಡುವುವು ಚಂದದಲಿ ;
ಅಲೆವ ದೆವ್ವಗಳು ಕೂಡ ಬಂದಿಲ್ಲಿ
ಚೀರಿ ಕುಣಿವುವಾನಂದದಲಿ !
ಕಣ್ಗೆ ನೋಟವಿದು, ಎದೆಗೆ ಬೇಟವಿದು,
ನನ್ನನೊಲಿದವಳ ಕೂಟವಿದು ;
ರಸಿಕರಾರಾಮವಿದುವೆ ಮಧುಧಾಮ !
ಮಂಗಳದ ತುಂಗ ಕೂಟವಿದು !
ನಿದ್ದೆವೋಳ್ಪ ಪೇರಾನೆಗಳ ತೆರದಿ
ಕರಿಯ ಬಂಡೆಗಳು ಬಿದ್ದಿಹವು :
ಗಿರಿಯ ಕಾಯುತಿಹ ಹಸುರು ಕೋಟೆಯೊಲು
ಸುತ್ತ ಹೆಮ್ಮರಗಳೆದ್ದಿಹವು !
ಶಾಂತಿ ವಿಶ್ರಾಂತಿ ಸಿರತೆಯಾನಂದ
ಮೌನ ಮುಕ್ತಿಗಳಿಗಿದು ಬೀಡು ;
ಗಿರಿಯುಗೆಲ್ಗಂಬದಿಂದ ರಂಜಿಪುದು
ನನ್ನ ನಚ್ಚಿನ ಮಲೆಯ ನಾಡು !
ವಿಶ್ವವೆಲ್ಲವೂ ಕರ್ಮರಂಗದಲಿ
ಕದನವಾಡುತಿರಲಾದಿಯಲಿ,
ಸಹ್ಯರಸಋಷಿಯು ಕುಳಿತು ಯೋಗದಲಿ
ಮುಳುಗಿಹನಿನ್ನು ಸಮಾಧಿಯಲಿ !

# ಉಷೆ

ಮೂಡುದೆಸೆಯೊಳಾಡಿಯಾಡಿ ಮೂಡಿ ಬರುವಳು,
ನಲಿದಾಡಿ ಬರುವಳು !
ಮೆಲು ಮೆಲ್ಲನೆ ಮೇಲೇರುತ ನೋಡು ಬರುವಳು,
ಉಷೆ ಮೂಡಿ ಬರುವಳು !

ಕುರುಡಿರುಳಿನ ಕರಿಹೊದಿಕೆಯು ತಿರೆ ಮೆಲ್ಲನೆ ತೆರೆಯುತಿಹಳು,
ಹೊಸ ಬನಗಳ ಹಸುರುಡುಗೆಯ ಹಿಮಮಣಿಗಳು ನಲಿಯುತಿಹವು
ತಂಗಾಳಿಯು ತಳಿರಮೇಲೆ ಸುಳಿಸುಳಿದಲೆದಡಿಯನಿಟ್ಟು
ಮಧುಪಾನದಿ ವೈಮರೆತಿಹ ಕಾಮುಕನೊಲು ಕುಣಿಯುತಿಹುದು !

ಬಾಂವಳದಲಿ ಚಲಿಸದಿರುವ ತುಂಡುಮುಗಿಲ ಹಿಂಡುಗಳಿಗೆ
ಅನುರಾಗದಿ ಚಿಮುಚಿಮುಕಿಸಿ ನವಮೋಹದ ಓಕುಳಿಯನು
ತಮದೆವೆಗಳ ತೆರೆ ತೆರೆಯುತ ಹೊಂಬೆಳಕಿನ ಮಳೆಗರೆಯುತ
ಚೈತನ್ಯದ ಸೌಂದರ್ಯದ ನವಜೀವದ ರಸವ ಚೆಲ್ಲಿ !

ಸವಿಗೊರಲಿನ ಇಂಚರದಲಿ ಶುಕ ಪಿಕಗಳು ಕರೆಯುತಿಹವು !
ಮಿಳಿರಾಡುವ ತರುಲತೆಯಲಿ ಅರಳಿದಲರು ಮೆರೆಯುತಿಹವು !
ಬನ ಬನದಲ ಸುಮುಸುಮದಲಿ ಅಳಿಯಾವಳಿ ಮೊರೆಯುತಿಹುದು !
ಸಂತಸದಲಿ ತಿರೆಯು ಉಷೆಗೆ ಸೊಗದ ಬರವ ಬಯಸುತಿಹುದು !

# ಅರುಣ ಗೀತೆ

ದೇವರ ಮಕ್ಕಳೆ ಎಲ್ಲರು ಏಳಿ,
ಬೆಳ್ಳಗೆ ಬೆಳಗಾಯಿತು ಬೇಗೇಳಿ!
ಮೂಡಣ ದೆಸೆಯಲಿ ಬಾಸಿನ ನೀರೆ
ಪೊಸವೇಟದಿ ನಾಚುತ ಕೆಂಪೇರೆ
ನೇಸರು ಬರುವನು ಬೆಟ್ಟವನೇರಿ
ಭೂಮಿಗೆ ಬಾಳಿನ ಬೆಳಕನು ಬೀರಿ!
ಹೊಂಬಿಸಿಲಪ್ಪಿಹ ಬನ ಬನದಲ್ಲಿ
ನನೆಕೊನೆಯೇರಿಹ ಮರ ಮರದಲ್ಲಿ
ರೆಕ್ಕೆಯ ರಿಸಿಗಳು ಮುದವನು ತಾಳಿ
ಸಾಮಗಾನದಲಿ ಕರೆವರು ; ಕೇಳಿ!
ದೇವರ ಮಕ್ಕಳೆ ಎಲ್ಲರು ಏಳಿ!
ಬೆಳ್ಳಗೆ ಬೆಳಗಾಯಿತು ಬೇಗೇಳಿ!

ಹೊಸ ದಿನವೈತಂದಿದೆ ನಿಮಗಾಗಿ ;
ಹೊಸ ಸೊಬಗಿಳೆಗಿಳಿದಿದೆ ನಿಮಗಾಗಿ ;
ಹೊಸ ಹೂವುಗಳರಳಿವೆ ನಿಮಗಾಗಿ ;
ಕರೆ ಕರೆವುವು ನಿಮ್ಮನು ತಲೆದೂಗಿ!
ಪಸುರಲಿ ಪೊಳೆವೈಕಿಲ್ಪನಿಮಾಲೆ,
ಬಣ್ಣದ ಚಿಟ್ಟೆಗಳಲೆಯುವ ಲೀಲೆ.
ಮೊರೆ ಮೊರೆವಳಿಗಳ ಮಂಜುಳ ಗಾನ,
ಸಗ್ಗವು ಬುವಿಗೊಲಿದಿತ್ತಿಹ ದಾನ!
ಸೊಬಗೆಂಬುದು ಲೋಕದ ಸಿರಿಗಣ್ಣು!
ನನ್ನಿಗೆ ಸೊಬಗೇ ನಚ್ಚಿನ ಹೆಣ್ಣು!
ದೇವರ ಮಕ್ಕಳೆ ಎಲ್ಲರು ಏಳಿ!
ಬೆಳ್ಳಗೆ ಬೆಳಗಾಯಿತು ಬೇಗೇಳಿ!

## ನವಿಲು

ನಿನ್ನೊಡೆ ತಾಳವ ಮುದದಲಿ ಬಡಿದು,
ನಿನ್ನೊಡೆ ಬೀಣೆಯ ತಂತಿಯ ಮಿಡಿದು,
ಬನಗಳ ತೊರೆಗಳ ಗಾನವ ಹಾಡಿ,
ತಳಿರಿನ ತೆರೆಗಳ ಕುಣಿತವ ಮಾಡಿ,
ಹಸುರಲಿ ಕುಣಿಯುತ ಹಾಡುತ ಬನ್ನಿ ;
ತೇಲುತ ಚಿಮ್ಮುತ ನಲಿದೈತನ್ನಿ !
ದೇವರ ಗುಡಿಯಿದೆ ನಿಮ್ಮೊಡಲಲ್ಲಿ ;
ಮೋಣವನಡಿಯಿದೆ ನಿಮ್ಮೆದೆಯಲ್ಲಿ ;
ಇಂದಿನ ಜಗದುಲ್ಲಾಸವು ನೀವೇ,
ನಾಳೆಯ ಮುಂದಿನ ಜೀವವು ನೀವೇ.
ದೇವರ ಮಕ್ಕಳೆ ಎಲ್ಲರು ಏಳಿ !
ಬೆಳ್ಳಗೆ ಬೆಳಗಾಯಿತು ಬೇಗೇಳಿ !

# ಪ್ರಾತಃಕಾಲ

ಆಹ! ನಾಕವೆ ನಮ್ಮ ಲೋಕಕೆ
ಕಳಚಿ ಬಿದ್ದಿದೆ ಬನ್ನಿರಿ!
ತುಂಬಿಕೊಳ್ಳಲು ನಿಮ್ಮ ಹೃದಯದ
ಹೊನ್ನ ಬಟ್ಟಲ ತನ್ನಿರಿ!
ಬೇಗ ಬನ್ನಿ! ಬೇಗ ಬನ್ನಿ!
ಕರಗಿ ಹೋಗುವ ಮುನ್ನ ಬನ್ನಿ!
ತಡವ ಮಾಡದೆ ಓಡಿ ಬನ್ನಿ!
ಸ್ವರ್ಗ ಹರಿಯುತಿದೆ!
ಇಳೆಯ ಮಕ್ಕಳನೆಲ್ಲ, ಕೇಳಿರಿ,
ಕೂಗಿ ಕರೆಯುತಿದೆ!

# ಮರದ ನೆಳಲು

ಅದೊ ಮತ್ತೆ! ಆ ಮರದ ಛಾಯೆ!
ಎಂದಿನಂತೆಯೆ ಬಿದ್ದು ಸಾಯುತಿಹುದಲ್ಲಿ!—
ಈ ನಿಯಮದಾಳ್ವಿಕೆಯು ನನ್ನ ಪೀಡಿಸುತಲಿದೆ
ಪೂರ್ವಜನ್ಮದ ಮಹಾ ಅಭಿಶಾಪದಂದದಲಿ.
ನಿಯಮಗಳ ನುಂಗಿ ಜೀರ್ಣಿಸಿ ವಿಹಾರಲೆನ್ನೆದೆಯು
ಕಾತರದಿ ಕಾಯುತಿದೆ.—

ಆ ಮರದ ಛಾಯೆ,
ಮಸಿಯ ಚೆಲ್ಲಿದ ತೆರದಿ ಹಸುರು ಬಯಲಿನ ಮೇಲೆ
ನೀಳವಾಗೊರಗಿಹುದು ಅಪಶಕುನ ರೂಪದಲಿ.
ಬಗೆಯ ಕದಡುವುದದರ ಮುಗ್ಧಮೌನದ ವಾಣಿ
ಮೊರೆಯುತೆನ್ನೆದೆಗಾವುದೋ ನಾನು ಮರೆತಿರುವ
ಸ್ವಾತಂತ್ರ್ಯ ಸಂದೇಶವನು ಸಾರಿ. ಬಿದ್ದಿಹುದು
ಬಯಲಿನಲಿ ವಿಕ್ರೀತ ದಾಸನೊಲು, ಬಿಡುಗಡೆಯ
ಪಡೆಯಲಾರದೆ ಬಯಸಿ! ದಿನದಿನವು ನೋಡುತಿಹೆ.
ದಿನದಿನವು ಬೆಳಗು ಹಗಲೆನ್ನದೆಯೆ, ಬಾನಿನಲಿ
ರವಿ ಹೊಳೆಯುವಾಗೆಲ್ಲ, ಮರದ ಕಾಲ್ದೆಸೆಯಲ್ಲಿ
ಬಿದ್ದು ಬೇಸರದೆ ಸಾಯುತ್ತಿಹುದು. ಶಿವ ಶಿವಾ,
ಒಂದು ಕ್ಷಣವಾದರೂ ತಪ್ಪಲೊಲ್ಲದೆ ದಾಸ್ಯ!
ಒಂದು ಕ್ಷಣವಾದರೂ ವೈವಿಧ್ಯಕಾದರೂ
ಬಿಸಿಲಿದ್ದು ಮರವಿದ್ದು ನೆಳಲಿರದೆ ಹೋಗದೆ!
ಎಲ್ಲಿ ನೋಡಿದರೆಲ್ಲರೂ ದಾಸರೆಯೆ. ಶಿವಾ!
ಈಶರೊಬ್ಬರ ಕಾಣೆ. ಬೆಂಕಿಗಾವಾಗಲೂ
ಹೊಳೆವ ದಹಿಸುವ ದಾಸ್ಯ; ಗಾಳಿಗಾವಾಗಲೂ
ಬೀಸಿ ಚಲಿಸುವ ದಾಸ್ಯ; ನಿಂತ ನೀರಿಗೆ ಸದಾ
ದಡದ ವಸ್ತುಗಳ ಮರುಬಿಂಬಿಸುವ ದಾಸ್ಯ!

ದಾಸ್ಯದಾಲಯವೀ ಮಹಾವಿಶ್ವ ! ಎಲ್ಲವೂ
ವಜ್ರಬಂಧನಗ್ರಸ್ತವಾಗಿಹವು ! ಒಂದು ದಿನ
ನೀರು ಸುಡಬಾರದೇ ? ಒಂದು ಸಲವಾದರೂ
ಕಲ್ಲು ಹಕ್ಕಿಯು ತೆರದಿ ಹಾರಾಡಬಾರದೇ ?
ಒಂದು ಕ್ಷಣಕಾದರೂ ದಾಸ್ಯನಿಯಮಗಳಳಿದು
ಸ್ವಾತಂತ್ರ್ಯ, ಸ್ವಾಚ್ಛಂದ್ಯ, ಹುಚ್ಚಾಟವಾಗದೇ ?
ಎಲ್ಲ ಹಾಳಾದರೂ ಆಗಿಹೋಗಲಿ ಇಂದೆ !
ಬೇಕಾದುದೆನಗೆ ಆ ಸ್ವಾತಂತ್ರ್ಯ ಶ್ರೀಯೊಂದೆ !

# ಸಾವಿನ ಸಮತೆ*

ಕುಲದ ಹೆಮ್ಮೆ, ನೆಲದ ಹೆಮ್ಮೆ,
ಎಲ್ಲ ಮಾಯೆಯು ;
ಬರಿಯ ತಿರುಳುಗೆಟ್ಟ ನೆರಳು,
ಟೊಳ್ಳು ಛಾಯೆಯು.
ಬಿದಿಯ ಸರಳಿಗಿರದು ಸರಳು !
ಕರಗಲರಿದು ಜವನ ಕರುಳು !
ಮುಡಿಯ ನೆತ್ತಿ,
ಹಿಡಿದ ಕತ್ತಿ
ಪುಡಿಯೊಳೆಲ್ಲ ಕಡೆಯೊಳುರುಳಿ
ಮಣ್ಣು ತಿಂದು ಪೋಪವು ;
ಹೊಲದ ಕತ್ತಿ ಬನದ ಕೊಡಲಿ
ಯೊಡನೆ ಒಂದೆಯಾಪವು !

ಕತ್ತಿ ಹಿಡಿದು ಕೆಲರು ಗೆಲ್ಲ
ಬಹುದು ರಣದಲಿ ;
ಮೆರೆಯಬಹುದು ಸಿರಿಯನೆಲ್ಲ
ಕೊಂದ ಕಣದಲಿ.
ಆದರೇನು ? ನರವು ಹರಿದು
ಬೀಳರೇನು ಸೊಕ್ಕು ಮುರಿದು ?
ಇಂದು ನಾಳೆ,
ಬಹುದು ವೇಳೆ !
ಸುಮ್ಮನಹರು ಮಾತು ಸತ್ತು
ರಣದ ಕೀಳು ಬದಿಯಲಿ ;

* ಜೆ. ಶರ್ಲಿ ಕವಿಯ "Death the Leveller" ಎಂಬುದರ ಅನುವಾದ.

## ಸಾವಿನ ಸಮತೆ

ಬೀರರೆಲ್ಲ ಸವಿಯ ತುತ್ತು
ಜವಗೆ ತುತ್ತತುದಿಯಲಿ!

ಹಣೆಯ ಮೇಲೆ ಜಸದ ಮಾಲೆ
ಬಾಡದಿರುವುದೆ?
ಹಿರಿಯ ಗೆಯ್ಮೆ ಗೈದ ಮೈಮೆ
ಬೀಳದಿರುವುದೆ?
ಗೆದ್ದು ಬಿದ್ದ ಬೀರರೆಲ್ಲಿ?
ನೋಡು, ಜವನ ದಾಡೆಯಲ್ಲಿ!
ಎಲ್ಲ ಕಡೆಗೆ
ಮಸಣದೆಡೆಗೆ!
ನಾವು ಗೈದ ಸೈಪದೊಂದೆ
ಕಟ್ಟಕಡೆಯೊಳುಳಿವುದು!
ಪುಡಿಯೊಳಿಳಿದು ಹೋದ ಮೇಲೆ
ಮೊಳೆತು ತಳಿತು ನಲಿವುದು!

# ಬೈಗುಗೆಂಪು

ಸುಂದರ ಮಂಗಳವೀ ಬೈಗು !
ರುದ್ರ ಮನೋಹರವೀ ಬೈಗು !

ನೆಚ್ಚಳಿದಳಿದಿಹ ಚೆಲುವೆಯರೆಲ್ಲರ
ಕೆನ್ನೆಗಳೆಳೆಗೆಂಪೀ ಬೈಗು ;
ರಕ್ಕಸನುರದಾ ರುಧಿರವನೀಂಟಿದ

ನರಹರಿ ಕೋಪವು ಈ ಬೈಗು !
ಭಾರತ ಪುತ್ರರು ಚೆಲ್ಲಿದ, ಚೆಲ್ಲುವ
ಶೋಣಿತ ರಣಧುನಿ ಈ ಬೈಗು ;
ಹುಟ್ಟಿದ ಕೂಡಲೆ ಹಸಿದೇ ಮಡಿದಿಹ
ಹಸುಮಕ್ಕಳ ಚೆಲುವೀ ಬೈಗು !

ಗೋಪಿಯರೊಡಗೂಡಾಡುವ ಹಾಡುವ
ಕೃಷ್ಣನ ಪ್ರೇಮವು ಈ ಬೈಗು ;
ಬರುತಿಹ ಲೋಹಿತ ವಿಪ್ಲವ ಸೂಚಕ
ರಕ್ತದ ಬುಗ್ಗೆಯು ಈ ಬೈಗು !

ಪರತಂತ್ರತೆಯನು ದಹಿಸುವ ಮಸಣದ
ಸೂಡಿನ ಕೇಸುರಿ ಈ ಬೈಗು ;
ಸ್ವಾತಂತ್ರ್ಯದ ಆರಾಧನೆಗೆತ್ತಿದ
ಕುಂಕುಮದಾರತಿ ಈ ಬೈಗು !

ಸುಂದರ ಮಂಗಳವೀ ಬೈಗು !
ರುದ್ರ ಮನೋಹರವೀ ಬೈಗು !

# ಮಿಂಚುಳ್ಳಿ

ಬಣ್ಣದ ರೆಕ್ಕೆಯ, ಬಣ್ಣದ ಕೊಕ್ಕಿನ,
ಬಣ್ಣದ ಗಾನದ ಬನಗಳ ಬೆಸ್ತನೆ,
ಬಣ್ಣದ ಜೀವದ ಮಿಂಗುಲಿಯೆ,
ಮಾನವರರಿಯದ ಗಾನ ತರಂಗದೊ-
ಳೀನನು ಸಾರುವೆ ವಿಪಿನಪ್ರವಾದಿಯೆ,
ಹಳ್ಳಿಯ ಜೋಯಿಸ ಮಿಂಚುಳ್ಳಿ ?
ನಿನ್ನುಲಿಯನು ಕೇಳಿದ ಹಳ್ಳಿಗರು
ನೆಂಟರ ಸಾವನು ಸಾರುವುದೆಂದು
ಮನದಲಿ ತಲ್ಲಣಗೊಳ್ಳುವರು !
ತರಳೆಯರಾದರೊ ಬಿಸುಸುಯ್ಯುತ್ತ
ತಿರುಗಲು ಹೋಗಿಹ ಗಂಡರ ನನೆದು
ಸುಮ್ಮನೆ ನಿನ್ನನು ಶಪಿಸುವರು !
ಕಬ್ಬಿಗನಾದರೊ ಸಂತಸದಿಂದ
ಬನದಿಂದೈತಹ ದನಿಯನು ಕೇಳಿ
ನಿನ್ನನು ಕೀರ್ತಿಸಿ ವಂದಿಪನು !
ಹೆದರುವುದೇತಕೆ ಹಾಡೆಬೆ ಹಕ್ಕಿ,
ಹಾಡುವ, ಹಾರುವ, ಬಣ್ಣದ ಚುಕ್ಕಿ !
ಮೂರ್ಖರ ಮಾತಿಗೆ ಮರುಗುವರೆ ?
ಮಿಂಚಿನ ಬಳ್ಳಿಗೆ ಕಾಮನ ಬಿಲ್ಲಿಗೆ
ಜನಿಸಿದ ಹೂವೋ ಹಕ್ಕಿಯೊ ನೀನು ?
ಕಿಟ್ಟನ ಕೊಳಲಿನ ಕಣ್ಣೇನು ?
ವೇಗವ ನೋಡಲು ಮಿಂಚಿನ ಮರಿಯು !
ಬಣ್ಣವು ಕಾಮನಬಿಲ್ಲಿಗೆ ದೊರೆಯು !
ಕೊಳಲಿನ ದನಿಗೆಣೆಯಿಂಚರವು !
ಮೋನದ ಬನಗಳ ಗಾನದಿ ತುಂಬುವೆ ;
ಮಲಗಿಹ ಗಿರಿಗಳನೆಚ್ಚರಗೊಳಿಸುವೆ ;

## ನವಿಲು

ಮೌನವನಿನ್ನೂ ಹೆಚ್ಚಿಸುವೆ!
ಯಾರಾನಂದಕೆ ಹಾಡುವೆ ನೀನು?
ನಿನ್ನೊಲಿದಾರನು ಕರೆಯುವೆ ನೀನು?
ಪಕ್ಷಿಯೆ, ಯಾರನು ಮೆಚ್ಚಿಸುವೆ?
ಎಳೆತನದಲಿ ಕೆರೆಯಂಚಿನ ಮೇಲೆ
ತಣ್ಣೀರಾಟವ ನಾನಾಡುತಲಿರೆ
ತೀರದ ಮರಗಳ ಮರೆಯಿಂದ
ಬಣ್ಣದ ಬಾಣದ ತೆರದಲಿ ಮಿಂಚಿ
ಹೊಳೆಯುವ ಮೀನನು ಕೊಕ್ಕಿನೊಳಿಟ್ಟು
ನೀ ಹಾರುತಲಿರೆ ಬೆರಗಾದೆ!
ಬಾಲನು ಬೆರಗಾದೆನು ನಾನಂದು!
ಯುವಕನು ಬೆರಗಾಗಿಹೆ ನಾನಿಂದು!
ಮುದಿತನದಲಿ ಬೆರಗಾಗುವೆ ಮುಂದೆ!
ಏಕೆಂದರೆ "ಮನುಜಗೆ ಮಗು ತಂದೆ!"

# ಮೈಸೂರಿನಲ್ಲಿ

ಭಗವಂತನಿಲ್ಲಿರದೆ ಮತ್ತೆಲ್ಲಿ ವೈಕುಂಠ
ದಲ್ಲಿಹನೆ? ವೈಕುಂಠವಿರುವುದೆಲ್ಲಿ
ಈ ದಿವ್ಯ ಭವ್ಯ ಸುಂದರ ದೃಶ್ಯದಲ್ಲಿರದೆ?
ಹುಣ್ಣಿಮೆಯ ಬೆಳ್ದಿಂಗಳಪ್ಪಿನಲ್ಲಿ
ಮಿಂಚುತಿಹ ಕಿರಿದೆರೆಯ ನಿರಿಗಳಿಂ ಮೈದೆರೆವ ಕೆರೆ!
ಸುತ್ತಲೂ ಸಾಲ್ಗೊಂಡ ಸೊಡರ ಮಾಲೆ!
ಪಡಿನೆಳಲ ದರ್ಪಣದಿ ವಿವಿಧ ವೈಚಿತ್ರ್ಯಮಯ
ಸ್ವರ್ಗೀಯ ಮೋಹನ ಜ್ಯೋತಿಶಾಲೆ!
ಬಾನಿನಲಿ ಕಾಣಿಸದೆ ಕೂಗುತಿದೆ ತೇನೆಹಕ್ಕಿ!
ತಣ್ಪುಗಣ್ಣಿರುಳಿನಲಿ ನುಣ್ಬೊಗರು ಮಾಯೆ ಹಬ್ಬಿ
ನಿದ್ದೆಗದ್ದಿದೆ ಬುವಿಯು! ಕವಿಯು ವಿಶ್ವವನೆ ತಬ್ಬಿ
ಸತ್ತಿಹನು ಸೌಂದರ್ಯದಿಂಪು ತಕ್ಕೆಯಲಿ ಸಿಕ್ಕಿ!

# ಬೆಳುದಿಂಗಳು

ಕತ್ತಲೆ ಕೋಣೆಯೊಳೇನನು ಮಾಡುವೆ?
ಮಿತ್ರನೆ, ಬಾ ಹೊರಗೆ!
ತಿಳಿಬೆಳುದಿಂಗಳ ಹೊಳೆಯಿಳಿಯುತಲಿದೆ;
ಬಾ, ಬಾ, ಬಾ ಹೊರಗೆ!
ಸುಂದರ ಮೋಹನ ಚಂದ್ರನ ಕಾಂತಿ
ಎಲ್ಲೆಡೆ ಹಬ್ಬಿಹುದು;
ಹುಣ್ಣಿಮೆಯಿರುಳಿನ ನೀರವ ಶಾಂತಿ
ತಿರೆಯನು ತಬ್ಬಿಹುದು.
ಬಾನ್ನೀರೆಯ ಸವಿಗನಸುಗಳಂದದಿ
ಬೆಳ್ಮುಗಿಲೋಡುತಿವೆ!
ಚೆನ್ನೆಯರಿಣುಕುವ ಕಣ್ಣುಗಳಂದದಿ
ತಾರೆಗಳಾಡುತಿವೆ.
ಜೊನ್ನನು ಕುಡಿಯುವ ಬೆಳ್ಮುಗಿಲೊಡಲಲಿ
ಮಳೆಬಿಲ್ಮೂಡುತಿವೆ;
ಮಳೆಬಿಲ್ಲೊಡಲ ಮುಗಿಲ್ಗಳು ಸರಸಕೆ
ಶಶಿಯನು ಕಾಡುತಿವೆ;
ಬನಗಳ ತಂಪನು ತಹ ತಂಗಾಳಿಯು
ತಣ್ಣನೆ ಬೀಸುತಿದೆ;
ದಣಿದಿಹ ಭೂಮಿಯ ಬಾಳಿನ ಎದೆಯಲಿ
ಸಯ್ಪನು ಸೂಸುತಿದೆ.
ಶಿವನೇ ಚಂದಿರನಂದದಿ ತೋರುತ
ಬಂದನು ಬಾನೆಡೆಗೆ!
ಶಿವನೇ ಜೊನ್ನಾಗಿಳಿಯುತಲಿರುವನು
ಸಗ್ಗದಿನಿಳೆಯೆಡೆಗೆ!

ಸೌಂದರ್ಯೋಪಾಸನೆಗಿದೆ ಪೊಳ್ತು;
ಬಾ, ಬಾ ಸಾಧನೆಗೆ!
ಸೌಂದರ್ಯದಿ ಶಿವ ಮೈದೋರಿಹನೈ,
ಬಾ ಆರಾಧನೆಗೆ!

# ಸಬಕ್ತಗೀನ್

ಸಬಕ್ತಗೀನ್! ಸಬಕ್ತಗೀನ್!
ಪೆಸರ್ ಕೇಳ್ದು ಬಲ್ಲೆಯೇನ್?
ಕರುಣೆಗೊಂದು ಕೋಡವನ್,
ಎರ್ದೆಯೊಲ್ಮೆಗೆ ಬೀಡವನ್!
ಕಬ್ಬಿಗರ್ಗೆ ಪಾಡವನ್,
ಕತೆ ಅವನದೆ ಪಾಡುವೆನ್!

ಬೆಂಟೆಗೆನುತಮೊಂದು ದಿನಂ
ಪೋದನವನ್. ದಟ್ಟಬನಂ
ಬೆಟ್ಟವೇರ್ದು, ಮುಗಿಲ ಮೀರ್ದು
ಪರ್ಬಿದತ್ತು! ಬನವ ಸಾರ್ದು
ಬೇಂಟೆಗಾರ ಸಬಕ್ತಗೀನ್
ತೊಳಲ್ದನ್ ಸಿಡುಪೊಳ್ತು ತಾನ್.
ಬತ್ತಳಿಕೆಯು ಬೆನ್ನಮೇಲ್
ಅತ್ತಮಿತ್ತಮುಲಿಯುತಿತ್ತು;
ತಲೆಯುಡುಗೆಯು ನೆತ್ತಿಮೇಲ್
ಪಿಂದೆ ಮುಂದೆಯಾಡಿದತ್ತು.
ಅವನ ಕುದುರೆ ಬಲು ತೊಳಲ್ದು
ನೊರೆಗರೆದುದು ಕಡು ಬಳಲ್ದು.
ಬೆಂಟೆಯೇಂ ಕಾಣ್ದುದಿಲ್ಲಂ,
ಬಾಣಮೊಂದು ಚಿಗಿದುದಿಲ್ಲಂ,
ಬೆಂಕೆಯುಗುಳ್ವ ಬಿಸಿಲ್ಗರೆದು
ಪಗಲ ಪೊಳ್ತದಿರ್ದುದುರಿದು!
ಬಾಯಾರ್ದುದು ಕುದುರೆ ತಾನ್,
ಬಾಯಾರ್ದನ್ ಸಬಕ್ತಗೀನ್.
ನೀರನೀಂಟಲೆಂದು ಬಗೆದು,

## ಸಬಕ್ತಗೀನ್

ಕುದುರೆಯಿಂದೆ ಕೀಳ್ಗೆ ನೆಗೆದು,
ಕೊಳನನೊಂದು ತಡಿಯ ಸೇರ್ದು,
ಕುದುರೆ ಆಳ್ ಉದಕವ ಪೀರ್ದು,
ತಣ್ಣೆಳಲೊಳ್ ಮಲಗಿದನ್,
ಸಬಕ್ತಗೀನ್ ಮಲಗಿದನ್.

ಸಬಕ್ತಗೀನ್ ಮಲಗಿರ್ದವನ್
ನಿದ್ದೆಗಳೆದು ಮೇಲೆಳ್ದನ್.
ಜಿಂಕೆಯೊಂದು ಮರಿಯ ಕೂಡೆ
ಜಲವನೀಂಟುತಿತ್ತು. ನೋಡೆ,
ಬೇಂಟೆಗಾರ ಸಬಕ್ತಗೀನ್
ಕೈಕೊಂಡನ್ ಬಿಲ್ ಬಾಣಮನ್.
ಪಾರ್ದು, ಜಿಂಕೆ ಪಾರಿದತ್ತು ;
ಮಿಗದೆಳೆವರಿ ಅಲ್ಲೆ ಇತ್ತು !
ಸಬಕ್ತಗೀನ್ ಕುದುರೆಯೇರ್ದು
ಮರಿಯದಿರ್ದ ತಡಿಯ ಸೇರ್ದು
ನೆಗಪಿ ಅದನ್ ಪಿಡಿದುಕೊಂಡು
ಬೀಡಿಗೊಯ್ಯುತಿರಲ್, ಕಂಡು,
ಒಲ್ಮೆಯುಳಿಸೆ ಸಾವ ಭಯುವ,
ಪಿನ್ ಪೋದುದು ತಾಯಿ ಹಯುವ!
ಪೆತ್ತ ಬಸಿರ್ ಬೆದರ್ವುದೇನ್ ?
ಪಡೆದ ಕರುಳ್ ಅಗಲ್ವುದೇನ್ ?
ಜಿಂಕೆ ಮರಿಯ ಕರೆವವೋಲ್,
ಬಸಿರ್ ಬೇನೆಯುಸುರ್ವವೋಲ್,
" ಸಬಕ್ತಗೀನ್, ಸಬಕ್ತಗೀನ್,
ಕಂದನಳಿಯಲ್ ಅಳಿವೆ ನಾನ್ !

ಎನ್ನ ಕರುಳನೊಯ್ವಿಯ ನೀನ್?
ಮಗುವನ್ ಕೊಡಯ್ ಬರ್ದುಕುವೆ ನಾನ್!"
ಎಂದು ಮೊರೆಯಿಡುವಂತೆವೋಲ್
ಮೊರೆಯುತಿರ್ದುದದರ ಗೋಳ್!

ಸಬಕ್ತಗೀನ್ ಕೇಳ್ದನದನ್;
ಎರ್ದೆಗರಗಿದನ್, ಮನಮರುಗಿದನ್!
ಕರುಣೆಯುದುವೆ ದೇವರಲ್ತೆ?
ಕಣ್‌ಪನಿಯೆ ತೀರ್ಥಮಲ್ತೆ?
ಸಬಕ್ತಗೀನನೆರ್ದೆಯೊ‘ಳಲ್ಲನ್ ’
ಕರುಣೆಯೋಲ್ ನೆಲಸಿದನ್!
ಸಬಕ್ತಗೀನ್ ಮರಿಯ ತೆಗೆದು,
ತನ್ನ ತೋಳೊಳ್ ತಳ್ಕಿ ಬಿಗಿದು,
ಮೆಯ್ ತುಂಬಲ್ ಮುತ್ತುಕೊಟ್ಟು,
ಅದರ ಪಣೆಗೆ ಪಣೆಯನಿಟ್ಟು,
ಪಿಂದೆ ಬರ್ಪ ಮಿಗವ ನೋಡಿ
" ಬಾರ ತಾಯೆ, ನಿನ್ನ ಬೇಡಿ
ದಿದೋ ಮರಿಯ ಕೊಟ್ಟಪೆನ್!
ಇಗೋ ಮಗುವ ಬಿಟ್ಟಪೆನ್! "
ಎಂದು ಮರಿಯ ಬಿಟ್ಟನಂದು.
ಬಡತನಮನ್ ಬಿಟ್ಟನಂದು!
ತಾಯಿಜಿಂಕೆ ಓಡಿಯೋಡಿ
ಬಂದು, ಮುದ್ದುಮರಿಯ ಕೂಡಿ,
ಪಿಂದೆ ಪಿಂದೆ ತಿರುಗಿ ನೋಡಿ,
ದಿಟ್ಟಯುಟ್ಟೆ, ಎರ್ದೆಯ ತೋಡಿ,

## ಸಬಕ್ತಗೀನ್

“ ತಿರೆಯನಾಳ್ವನಕ್ಕೆ ” ಎಂದು
ಪರಕೆಗೈದು ಪೋದುದಂದು!

ವರವನೀವ ಶಕ್ತಿ ‘ ಅಲ್ಲಂ ’-
ಗೋರ್ವನಿಗೇ ಇರ್ಪುದಿಲ್ಲಂ !
ತಾಯಿಯಳ್ಕರಿತ್ತವರಂ
‘ಅಲ್ಲ’ನ ವರದಂತೆ ಚಿರಂ!
ಅಪ್ಪುದೊ? ಅಲ್ತೊ? ಕೇಳ ನೀನ್,
ಪೇಳ್ವನವನ್ ಸಬಕ್ತಗೀನ್ !

# ಕುಲ

ಕುಲ, ಕುಲ, ಕುಲವೆಂದೊರಲುವೆ ಏತಕೆ?
ಕೋಗಿಲೆಗಾವುದು ಕುಲವಿದೆ ಹೇಳು?
ಕಿಲ! ಕಿಲ! ಕಿಲವೆಂದೂಳಲು ತಳಿರೊಳು
ಕೆಳಗಿವಿಗೇಳ್ವಿಯ ಕುಲವನು ನೆನೆದು?

ಬೇಸಗೆ ಸಮಯದಿ ಬೇಸರಗೊಂಡಿರೆ
ಗೊಲ್ಲನ ಕೊಳಲನು ಕೇಳಿಹೆಯೇನು?
ವೇಣುನಿನಾದವು ಕಿವಿದೆರೆಗೈತರೆ
ವಂಶದ ವಂಶವ ಹಿಕ್ಕುವೆಯೇನು?

ಎದೆಯಿಂದೈತಹ ನುಣ್ದನಿಯಿಂಪಿರೆ
ಕೋಗಿಲೆಗಾವುದು ಕುಲವಿರಲೇನು?
ವಾಣಿಯದೊಂದೇ ವಿಶ್ವವ ತುಂಬಿರೆ
ವೇಣುಗಳೆನಿತೆನಿದಾದರೆ ಏನು?

# ಕುಕ್ಕನಹಳ್ಳಿಯ ಕೆರೆಯಾಚೆ

ಸಾಯಂಕಾಲವು ಮೌನವನಾಂತಿದೆ
ಧ್ಯಾನದೊಳಿರ್ಪ ತಪಸ್ವಿನಿಯಂದದಿ!
ಗುರುವಿನ ಮುಂಗಡೆ ಸುಳಿಯುವ ಶಿಷ್ಯನ
ಚಲನೆಯ ತೆರದಲಿ, ತಣ್ಣನೆ ಗಾಳಿಯು
ಬೀಸುತಲಿದೆ. ಬಹುದೂರದ ಪಡುವಣ
ದೆಸೆಯ ದಿಗಂತದೊಳಾಗಲೆ ಮುಳುಗಿದ
ಸೂರ್ಯನ ಕೆಂಪನು ತಳೆದಿರುವಂಚಿನ
ಕಿರಿಯ ಮುಗಿಲ್ಗಳ ಮೊತ್ತವು ಚಲಿಸದೆ
ಜಪಮಾಡುತಲಿದೆ. ನಿಂತಿಹ ಮರಗಳೊ,
ಮನವನು ಭಾವ ಸಮಾಧಿಯೊಳದ್ದಿಹ
ರಸಯೋಗಿಗಳಂದದಿ ತೋರುತಲಿವೆ!
ಅವರೆಯ ತೊಗರಿಯ ಹೊಲಗಳು ಕೂಡ
ಯಾವುದೊ ಮಂತ್ರವನುಸಿರುತಲಿರುವುವು!
ಈ ಕೆರೆ, ಆ ಗಿರಿ, ಆ ಪುರ, ಈ ಹೊಲ,
ಎಲ್ಲವು ಸಂಧ್ಯಾಯೋಗಿನಿಯೆಡೆಯಲಿ
ದೀಕ್ಷೆಯ ಕೈಕೊಳ್ಳುತಲಿವೆ! ನಾನೂ
ದೀಕ್ಷಿತನಾಗುವೆ! ಸದ್ದಿಲಿ ಬೈಗಿದು
ಶಾಂತಿಯನೆಂತುಟು ಮಳೆಗರೆಯುತಲಿದೆ!
ಸೃಷ್ಟಿಯು ಒಯ್ಯನೆ ಮೈಮರೆಯುತಲಿದೆ!

# ಎನಿತು ದಿನ ?

ಎನಿತು ದಿನ ನಿನ್ನ ನಾನೆದುರುನೋಡಲಿ ?
ನಿನ್ನನಗಲಿ, ಕೆಳದಿ ಕವಿತೆ, ಬೆಂದು ಬಾಡಲಿ ?

ಮೂಕನಾದ ವಾಗ್ಮಿಯಂತೆ, ಗಾನವುಳಿದ ವೀಣೆಯಂತೆ,
ನುಡಿಯ ಬಡತನದಲಿ ಭಾವ ಹೊಮ್ಮಲರಿಯದೆ,
ಬಲೆಗೆ ಬಿದ್ದ ಸಿಂಗದಂತೆ, ಪಂಜರದ ವಿಹಂಗದಂತೆ,
ಹೊರಡಲೆಳಸಿ, ಹೊರಳಿ, ಕೆರಳಿ, ನರಳುತಿರುವುದು.

ಕೆಂಪು ಬಿಸಿಲಿನಲ್ಲಿ ಮಿಂದ ಹೊಲಗಳೆಲ್ಲ ಹಸುರಿನಿಂದ
ಹಿಗ್ಗಿ ಮಂದಹಾಸದಿಂದ ನಲಿಯುತಿರುವುವು !
ಬನದ ಮೌನದಿಂದ ಉಕ್ಕಿ, ಬನದ ತಳಿರ ನಡುವೆ ಸಿಕ್ಕಿ
ಚಿಮ್ಮಿವಿನಿದು ದನಿಯ ಹಕ್ಕಿ ಕರೆಯುತಿರುವುದು !

ತೆರೆಯ ನಿರಿಯ ಹಿರಿಯ ಕೆರೆಯನಪ್ಪಿ ನಲಿವ ಹಸುರು ಕರೆಯ
ಚೆಲ್ವಿನಿಂದ ಮೆರೆವ ತಿರೆಯ ನೋಡಲೆದೆಯಲಿ,
ತಾಯ ತೋಳತಕ್ಕೆಯಿಂದ ಬಿಡಿಸಿಕೊಳ್ಳಲೆಳಸಿ, ಕಂದ
ಬರಿದೆ ಹೊರುವಂದದಿಂದ ಭಾವ ಹೋರ್‍ವುದು !

# ಮುನ್ನೇಸರು

ಅ ಹ ಹಾ!
ಈಶ್ವರ ಸೃಷ್ಟಿಯ ಚೆಲುವೆನಿತು!
ಅ ಹ ಹಾ!
ಮಾನವ ಜನ್ಮದ ಗೆಲುವೆನಿತು!

ತಳಿರೊಳು ಹೊಳೆಯುವ ಹನಿಗಳ ತೊಳಗಿ
ನಸುಗಣ್ದೆರೆಯುವ ತಿರೆಯನು ಬೆಳಗಿ
ಮೂಡಣ ಬಾನಿನ ಕರೆಯೊಳು ಮೂಡಿ
ಮೆರೆವುದು ನೇಸರು, ಕಂಗಳೆ, ನೋಡಿ!

ತಣ್ಣನೆ ತೀಡುವ ಸುಸಿಲೆಲರಲ್ಲಿ
ಬಗ್ಗಿಸಿ ಕೋಗಿಲೆ ನಿಡುಸರದಲ್ಲಿ
ಸಗ್ಗವ ಕರೆಯುವ ಪುಗಿಲನು ಕೇಳಿ
ಸುಗ್ಗಿಯ ಮುದವನು, ಕಿವಿಗಳೆ, ತಾಳಿ!

ತೆಂಕಣ ಗಾಳಿಯು ಬರೆವರೆ ಬೀಸಿ,
ಬಿಂಕದೊಳೆಸೆಯಲು ಬನಗಳ ದೇಸಿ,
ಸೋಂಕಿನ ಸೊಗದಲಿ ನಲಿಯೈ, ತನುವೆ!
ಸಿರಿಸೊಬಗೊಳು ಮೈಮರೆಯೈ, ಮನವೆ!

# ಜೋಗ

ನೀಲಿ ಬಣ್ಣದ ಹೊಗೆಯ ತಿಳಿಯ ತೆಳುಮುಸುಕಿನಲಿ
ಕಾಡು ಬೀಡಾಗಿರುವ ಮಲೆನಾಡಿನಚಲಗಳ
ಹಿಂದುಗಡೆ ದೂರದಲಿ ಮೂಡಿಬಹ ಮುಂಬೆಳಗು
ಮಿಂಚಿನುರಿದೋರಿದುದು. ತಂಗಾಳಿ ಬೀಸಿದುದು.
ಪಕ್ಷಿಗಳ ಪರಿಷತ್ತು ನೆರೆಯುತಿರೆ ಮೋಟಾರು
ಮಿಂಚಿದುದು ಗುಂಪು ಮರಗಳ ನಡುವೆ ಕೆಂಪಾದ
ಹೆದ್ದಾರಿಯಲಿ. ದೂರ ದೂರದೂರಕೆ ಸರಿದು
ಶಿವಮೊಗ್ಗೆ ದೂರಾಯ್ತು. ಕಾರ್ತಿಕದ ನೆಲದ ಸಿರಿ
ಎರಡು ಕೆಲದೊಳು ಕಂಗೊಳಿಸಿ ಮನವ ಸೆರೆಗೈದು
ಮೋಹಿಸಿತು ಬೆಳೆಯುವೆಳಬಿಸಿಲಿನಲಿ : ಗದ್ದೆಗಳು,
ಹಸುರಾಗಿ ಎದೆ ನಿಮಿರಿ ಎದೆಯೆತ್ತರಂ ಬೆಳೆದು
ತೆನೆಮೂಡಿ ಹಸುರು ಮಲೆಗಳ ಹದುಳ ತಕ್ಕೆಯಲಿ
ಸೆರೆಸಿಕ್ಕಿ ಮೃದುಪವನ ಹತಿಗೆ ತೆರೆತೆರೆಯಾಗಿ
ತಲೆದೂಗಿ ಶಾಲಿವನ ವನಧಿಯೊಲು ಮುದ್ದಾಗಿ
ಮೆರೆವ ಬಿತ್ತರದ ಗದ್ದೆಗಳು ; ನಡು ನಡುವೆಯಲಿ
ಹೆಮ್ಮರಗಳೆಡೆಯೊಳಿಹ ಕಿರುಗುಡಿಸಲೂರುಗಳು ;
ಬನದ ಮರೆಯಜ್ಞಾತವಾಸದಲಿ ತಪಗೈವ
ಮಲೆನಾಡಿನೊಂದೆ ಮನೆ ಹಳ್ಳಿಗಳು ; ಅಲ್ಲಲ್ಲಿ
ಮೆರೆವ ಸಿರಿವಸಿರ ತೋಟಗಳಡಕೆ ತೋಟಗಳು ;
ನಡುನಡುವೆಯಲ್ಲಲ್ಲಿ ಗದ್ದೆ ಬಯಲುಗಳಲ್ಲಿ
ಮುಗುದ ಮೊಗವೆತ್ತಿ ನೋಡುವ ಕರ್ಮಯೋಗಿಗಳು,
ನೇಗಿಲಿನ ಯೋಗಿಗಳು ; ಎಲರೊಳಲೆಯುಲೆಯಾಗಿ
ಬಳುಕಿ ನಲಿಯುವ ಹುಲ್ಲು ಬಯಲಿನಲಿ ಮೇಯುತಿಹ
ತುರುಗಳನು ಕಾವ ಕಂಬಳಿಯ ತುರುಗಾಹಿಗಳು ;
ಕೆಂಪು ಬಿಳಿತಾವರೆಗಳರಳಿರುವ ಮಲೆಯ ಕೆರೆ ;

ಮಡಿವಾಳ, ಕಾಜಾಣ, ಮಿಂಚುಳ್ಳಿ, ಕಾಮಳ್ಳಿ,
ಗಿಳಿಯು, ಕೋಗಿಲೆ, ಬಿಳಿಯ ಕೊಕ್ಕರೆಯೆ ಮೊದಲಾದ
ಹಕ್ಕಿಗಳು ; ಮುಗಿಲ ಮುಟ್ಟುವ ದಟ್ಟಕಾಡುಗಳು,
ಹೆದ್ದಾರಿಯನು ಬರಿಯ ಕಿರುಗಲ್ಲಿಯನೆ ಮಾಡಿ
ಭೀಮನನೆ ಮಲೆಯುತಿಹ ಹೆಬ್ಬನದ ಬೀಡುಗಳು ;
ತಲೆಯ ಮೇಗಡೆ ದೂರ, ಬನಗಳಿಕ್ಕಟ್ಟಿನಲಿ
ನೀಲಿ ಬಣ್ಣದ ನೀರು ಹರಿವ ಕಾಲುವೆಯಂತೆ
ಹರಿಯುತಿಹ ತಿಳಿಬಾನು ; ಕುಳಿರನೊಡರಿಪ ಚಳಿಯು
ಮಳೆಗರೆಯುತಿಹ ಬನದ ಬಿಡುವ ಕಾಣದ ನೆಳಲ
ಹೆಗ್ಗಡಲು ; ಬನಗತ್ತಲೆಯ ನಡುವೆ ಕಡುನೀಲಿ
ಬಟ್ಟೆಟ್ಟು, ನಸುನೀಲಿಯನು ತೊಟ್ಟು, ನೋಟಕರ
ಬಗೆ ನಲ್ಮೆಯೊಳೆ ಬೆಚ್ಚಿ ಹಿಗ್ಗುವಂದದಿ ಮಾಡಿ
ರಂಜಿಸುವ ಗುರಗಿ ಗಿಡಗಳ ಕುಸುಮ ಸಮ್ಮೇಳ ;
ಅಲ್ಲಲ್ಲಿ ಹೆಬ್ಬಿದಿರು ಕಿರುಬಿದಿರು ಬೀಡುಗಳ
ಬನದ ಕಾಲ್ದೆಸೆಯಲ್ಲಿ ಧೀರವಾಗೆದ್ದಿರುವ
ಗುಡಿಯ ಗೋಪುರದಂಥ ಹುತ್ತಗಳು ; ಕಾಡಿನಾ
ಬಲೆನೆರಳಿನಲಿ ಚಿಮ್ಮಿ ಮಿಂಚಿ ಹೋಗುವ ಜಿಂಕೆ ;
ಜೀರ್ದುಂಬಿಗಳ ಚೀರುದನಿ ; ಮೈಲಿಕಲ್ಲುಗಳು ;
ನಿರ್ಜನತೆ ನೀರವತೆ ಗಾಂಭೀರ್ಯ ಮೌನಗಳು ;
ಉಬ್ಬುಗಳು, ತಗ್ಗುಗಳು, ಕಣಿವೆಗಳು, ಬೆಟ್ಟಗಳು,
ದುರ್ಗಮ ಶ್ರೇಣಿಗಳು, ಸಹ್ಯಾದ್ರಿ ಘಟ್ಟಗಳು !
ಏನು ದನಿ ?
ಘೂರ್ಮಿಸುವ ದನಿಯೇನು ? ಅರುವತ್ತು
ಮೈಲಿಗಳು ಕರಗಿಹೋದುದು ನಿಜವೆ ?
ಹೌದೌದು !

ನೋಡಲ್ಲಿ, ಹರಿವ ಹೊಳೆ! ಇದೆ ದಾಟುಗಂಡಿ!
ತೆಪ್ಪವಿದೆ ನೋಡಲ್ಲಿ; ಅಂಬಿಗರ ಕರೆ ಹೋಗು!
ಇನ್ನೆರಡೆ ಫರ್ಲಾಂಗಿನಲಿ ಧುಮುಕಿ ವಿಪ್ಲವವ
ವಿರಚಿಸುವ ಸುತರಂಗೆ, ಏನಿಲ್ಲಿ ಶಾಂತಿಯನು
ನಟಿಸುತಿಹಳೈ!
ಏನಿದೀ ದೃಶ್ಯ! ಈ ಕಾಡು
ಆ ಪರ್ವತಾಗ್ರದಿಂ ಹೊಳೆಗೆ ಹಾರುವೆನೆಂದು
ಓಡೋಡಿ ಐತಂದು ಮುಗ್ಗರಿಸಿ ನಿಂತಿಹುದು
ದಡದ ತುದಿಯಂಚಿನಲಿ ನಿಟ್ಟುಸಿರೆಳೆದು, ಬಾಗಿ
ಮುಂಗಡೆಗೆ! ಗಗನವನೆ ಕಿರಿದಾಗಿ ಮಾಡಿಹವು
ಈ ಭೀಮ ಪರ್ವತ ಶ್ರೇಣಿಗಳು!
ತೇಲಿದುದು
ತೆಪ್ಪ. ಮೈಸೂರು ಬಂಗಲೆಗೆ ನಿಟ್ಟೋಟದಲಿ
ಹಾರಿದುದು ಮೋಟಾರು! ಅಯ್ಯೊ ಎದೆ ಹಿಗ್ಗುತಿದೆ!
ಜೀವ ಸಿಡಿದೊಡೆಯುತಿದೆ! ನೋಡಲ್ಲಿ! ನೋಡಲ್ಲಿ!
ಕ್ರಾಂತಿ! ತಾಂಡವಲೀಲೆ! ವಿಲಯ! ವಿಪ್ಲವ! ಹುಚ್ಚು!
ಸೌಂದರ್ಯಮಾಯೆ! ಜೋಗದ ಭೀಷ್ಮ ಜಲಪಾತ!
ಪಾತಾಳ! ಪಾತಾಳ! ಏನಾತ್ಮಹತ್ಯ!
ಹಾರದಿರು! ಹಾರದಿರು! ಓ ಶರಾವತಿ ನಿಲ್ಲು!
ಈ ಘರ್ಜನೆಯೊಳೆಲ್ಲಿ ಕಬ್ಬಿಗನ ಕಿರುಸೊಲ್ಲು?
ನಾನೇಕೆ ಕುದಿಯುತಿಹೆನಿಂತು ಉದ್ವೇಗದಲಿ?
ಬೆಟ್ಟ ಕಾಡುಗಳೆಲ್ಲ, ಮುಗಿಲು ಬಾನುಗಳೆಲ್ಲ,
ಶಾಂತಿಯಲಿ ಮೌನದಲಿ ನಿಂತು ನೋಡುತ್ತಿಹವು;
ಯಾರೊಬ್ಬರೆದೆಯಲ್ಲಿ ಇನಿತು ತಳಮಳವಿಲ್ಲ!
ಎಲ್ಲರೂ ಜೋಗದೀ ಜೋಗುಳವನಾಲಿಸುತ

ವ್ಯೈಮರೆತು ನಿದ್ದೆಗೈಯುತ್ತಿಹರು ; ನೂರಾರು
ಶತಮಾನಗಳ ನಿದ್ದೆ ! ಶಬ್ದವನೆ ಮೌನಮುಂ
ಗೈದಿರುವ ನಿದ್ದೆ ! ಮೋಣಿದು ಪ್ರಕೃತಿದೇವಿಗೇಂ
ಗರುಡಿಯೋ ? ಬನಬೆಟ್ಟ ಬಾನುಗಳು ಪ್ರೇಕ್ಷಕರೊ ?
ಹಾರುತಿಹ ಹೊಳೆಯಿವಳು ಬರಿಯಾಟಗಾರ್ತಿಯೋ ?
ಆಟವಾಡುತಲಿಹಳು, ನೋಟ ನೋಡುತಲಿಹರು !
ಎಂದಿಗೂ ಮುಗಿಯದಿದೆ ಈ ಆಟ ನೋಟಗಳು !
ಕುದಿಯದಿರು ಎಲೆ ಮನವೆ; ನೀನು ನೋಟಕನಾಗಿ
ನಿಂತು ನೋಡೀ ರುದ್ರಲೀಲೆಯನು. ಯುಗಗಳಿಂ
ನೋಡಿಯೂ ಬಾನು ತಣಿದಿಲ್ಲ ; ಮಲೆಯೋಳಿಗಳು
ನೋಡಿ ಬೇಸರಲಿಲ್ಲ; ಕಾಡುಗಳು ದಣಿದಿಲ್ಲ ;
ಭೂದೇವಿ ನೊಂದಿಲ್ಲ ; ಎಲ್ಲವನು ಕನಸಿನಲಿ
ಕಾಣುತಿಹ ಬೊಮ್ಮನಿಗೆ ಈ ಲಲಿತ ಸ್ವಪ್ನವನು
ಕಂಡು ಪೂರೈಸಲಾಸೆಯೆ ಇಲ್ಲ ! ಸಿಲುಕಿಹನು
ತನ್ನ ಕನಸಿನ ಮೋಹದಲಿ ತಾನೆ ! ಸೌಂದರ್ಯ
ಎಂದಿದನು ಕರೆಯುವೆನೆ ಬಹು ಭಯಂಕರವಾಗಿ
ತೋರುತಿದೆ ; ರೌದ್ರವೆಂದೊರೆಯುವೆನೆ ಕಣ್ಗಳಿಗೆ
ಮಳೆಬಿಲ್ಲಿನಿಂಪುತನ ತೋರುತಿದೆ. ಅಂದೆನಗೆ
ಎರಡು ವರುಷಗಳಾಚೆಯಲಿ ರೌದ್ರದಂದದಲಿ
ರಂಜಿಸಿತು ; ಇಂದೆನಗೆ ಸಂಗಾತಿಯಂದದಲಿ
ಸೌಂದರ್ಯವನು ತೋರಿ ನಲಿಯುತಿದೆ ! ಓ ಪ್ರಕೃತಿ,
ನೀನು ನಮ್ಮಾತ್ಮದಾ ಭಾವಜಲಧಿಯೊಳೇಳ್ವ
ಬುದ್ಬುದ ಸ್ವರೂಪಿಣಿ ; ನಮ್ಮ ಸಂಸ್ಕಾರದಲಿ
ಹುದುಗಿರುವ ಬಣ್ಣವನೆ ತೊಟ್ಟು ಮೆರೆವಳು ನೀನು !
ನೀ ರಾಣಿ ನಾವು ಕಿಂಕರರಾಗಲೊಪ್ಪಿದರೆ ;

ನೀ ದೇವಿ ಭಕ್ತರಾಗಿರೆ ನಾವು; ನೀ ನಲ್ಲೆ
ನಾವು ರಸಋಷಿಗಳಾಗಿರೆ; ನೀನು ಬರಿ ದಾಸಿ
ಪ್ರಭುಗಳಾದರೆ ನಾವು ಬೊಮ್ಮದೊಂದಿಗೆ ಸೇರಿ!
  ಬನದ ಹಸುರಿಂದ ಹಸುರ್ಗಟ್ಟಿ ಹಗಲಿನ ಬಿಸಿಲು
ಮೇರೆಯರಿಯದೆ ಮಲಗಿಹುದು ಮೇರೆದೋರದಿಹ
ತಳಿರ ಹೆಗ್ಗಡಲ ಮೇಲೆ; ಚಲಿಸದೆ ನಿಂತಿಹುದು
ನೀಲಿಮಾ ನಿರ್ಮಲ ನಭೋವಿತಾನಂ, ಮಲೆಯ
ಮಸ್ತಕದ ನಿಬಿಡ ಭೂರುಹ ಶಿಖರದಂಚಿನಲಿ
ಹರಿದಂತವನು ರಚಿಸಿ; ಮಾಲೆ ಮಾಲೆಗಳಾಗಿ
ಮುದ್ದೆ ಮುದ್ದೆಗಳಾಗಿ ಮಂದೆ ಮಂದೆಗಳಾಗಿ
ತೆರೆಯ ಹಿಂಗಡೆ ತೆರೆಯು ಬೆಂಬತ್ತಿಯುರುಳ್ವಂತೆ
ಮಲೆಗಳೆಂಬುವ ಮಲ್ಲರೇಂ ಮಲೆತು ನಿಮಿರಿಹರು
ಗಾಳಿವಟ್ಟೆಯನಂಡಲೆವದೊಂದು ಬಿಂಕದಲಿ!
ಆದರೆಂತಹ ಮೌನ! ಮೇಣಿದೆಂತಹ ಶಾಂತಿ
ಈ ಹಸುರು ಹುಚ್ಚಿನಲಿ? ಜಲಪಾತ ಘರ್ಜನೆಯೆ
ಮೌನಕ್ಕೆ ಒಂದು ತಳಹದಿಯಂತೆ ತೋರುತಿದೆ!
ಕಾಡುಗಳೋ ಕಿವಿಮುಚ್ಚಿ ಕಣ್ಮುಚ್ಚಿ ಮುಳುಗಿಹವು
ತುದಿಮೊದಲರಿಯದಿಹ ಸಮಾಧಿಯಲಿ! ಎಲ್ಲವೂ
ಜಲಪಾತ ನಾಟಕಕೆ ಸಮೆದಿರುವ ರಂಗದೊಲು
ರಂಜಿಸಿವೆ.
        ಧುಮುಕುತಿದೆ ಹುಚ್ಚು ಹೊಳೆ ಕವಲೊಡೆದು
ಹಾಲು ಹೊಳೆಗರೆವಂತೆ, ಹಿಟ್ಟುರುಳಿ ಸುರಿವಂತೆ,
ಬಿಳಿಮಂಜು ಹರಿವಂತೆ, ಹತ್ತಿತೊರೆಯಿಳಿವಂತೆ,
ಬಿಳಿಯ ಮಲ್ಲಿಗೆ ಮೊಗ್ಗುಗಳ ಗಿರಿ ನಿರ್ಝರಿಣಿ
ಎಡೆಬಿಡದೆ ಧುಮುಧುಮುಕಿ ಹರಿವಂತೆ, ಬೆಳ್ನೊರೆಯ

ಹೊಳೆ ತುಂತುರಿನ ವೇಷವನು ಧರಿಸಿ ನೆಗೆವಂತೆ,
ಮುಗಿಲ ಬೆಳ್ದೊರೆಯಂತೆ ಕರಿಬಂಡೆಗೆದುರಾಗಿ
ಘುಮುಕುತಿದೆ ಹುಚ್ಚುಹೊಳೆ ಓಂಕಾರವನು ಕೂಗಿ!
ಈ ಅನಾಹತ ನಾದದಲಿ ಮುಳುಗಿ ಮರವಟ್ಟು
ಯೋಗಮೂರ್ಛೆಗೆ ಸಂದು ಹೋದಂತಿಹುದು ತಿರೆ!
ಕ್ರಾಂತಿಯಿಂದಲೆ ಶಾಂತಿ ಹೊರಹೊಮ್ಮಿದಂತಿಹುದು!
ಪಾತಾಳದೊಂದು ಕಡೆಯಿಂದ ಮತ್ತೊಂದೆಡೆಗೆ
ಹಬ್ಬಿದಂತಿದೆ ಮೆರೆವ ಆ ನೀಳ ಮಳೆಬಿಲ್ಲು
ಆ ದೂರದಾಳದಲಿ! ಕೆಳಗಿರುವ ನೀರೇಳು-
ರಂಗುಗಳನುಟ್ಟು ರಂಜಿಸಿದೆ. ಅದೊ ಕೆಳಗಲ್ಲಿ
ಬಿದ್ದು ಹರಿಯುವ ನೀರು ಘುಮುಕಿದಾಯಾಸದಲಿ
ಬೆವರಿ ಮೆಲ್ಲಗೆ ಹರಿಯುತಿದೆ ನಿಟ್ಟುಸಿರನೆಳೆದು;
ಪತಿಯೊಡನೆ ನೀಚ ಕಲಹವನಾಡಿ ಕೋಪದಲಿ
ಕ್ಷಣಿಕ ಉದ್ರೇಕದಲಿ ಬಾಳು ಬೇಸರವೆಂದು
ಹುಸಿನಂಬುಗೆಯನಾಂತು ಮನೆಯಿಂದ ಪೊರಮಟ್ಟು
ಗುಟ್ಟಾಗಿ ಆತ್ಮಹತ್ಯಂಗೈಯಲುಜ್ಜುಗಿಸಿ
ಕೈಗೂಡದೆಯೆ ಸೋತು, ಗುಟ್ಟು ಬಯಲಪ್ಪುದೋ
ಎಂಬ ಭಯದಲಿ ನಾಚಿ ಬನದ ಹೊದರಿನ ನಡುವೆ
ಮುದುಗಿ ಹುದುಗುವ ಹೆಣ್ಣು ಹರಿದು ನುಸಿವಂದದಲಿ
ಕೆಳಗೆ ಹಾರಿದ ಹೊಳೆಯು ಮೈಯುಡುಗಿ ಕಿರಿದಾಗಿ
ನಾಚಿ ಬೆವರುತ ನಡುಗಿ ಬಂಡೆಯಡಿಯಲಿ ಹೊಕ್ಕು
ಮೈಗರೆದು ಮರೆಯಾಗಿ ಮರಳಿನಿತು ದೂರದಲಿ
ಬೆಟ್ಟಗಳ ಕಿರುಗಣಿವೆಯಿಕ್ಕಟ್ಟಿನಲಿ ಇಣಿಕಿ,
ಯಾರೊ ಕಂಡರು ಎಂದು ತಿರುಗಿ ನೋಡುತ್ತಳುಕಿ,
ನಡೆಯಲಾರದೆ ನಡೆದು ಹರಿಯುವಳು ಪಾವನೆಯು

ಪಾಪದಿ ಪತಿತಳಾಗಿ! ಓ ಸಖಿ ಶರಾವತಿಯೆ,
ರುದ್ರಕಾರ್ಯವನೆಸಗಿ ಕ್ಷುದ್ರಳಾದೆನು ಎಂದು
ದುಗುಡಪಡಬೇಡಮ್ಮ: ಬಾಳಿನಲಿ ಬೀಳುವುದು
ಸಹಜವಾಗಿರುವಂತೆ ಬಿದ್ದೇಳುವುದು ಸಹಜ.
ಸಾಧಕಗೆ ಬೀಳುವುದು ಏಳುವುದರಂತೆಯೇ
ಚಿಹ್ನೆಯು ಪುರೋಗತಿಗೆ. ನಿಲ್ಲುವುದೆ ಸಾವು;
ಚಲಿಸುವುದೆ ಬಾಳು. ನಲ್ಲಿಯನರಸಿ ತೆರಳುವರು
ನಾವು; ನಮಗೇಳುವುದು ಬೀಳುವುದು ಗುರಿಯಲ್ಲ.
ಎದ್ದರೂ ಬಿದ್ದರೂ ನಲ್ಲಿಯೆಡೆಗೆಡೆಬಿಡದೆ
ಮೇಲೇರುವುದೆ ಗಮ್ಯ. ದಿಟದಿಂದಲಾವಗಂ
ದಿಟಕೇರುವೆವೆ ಹೊರತು ಸಟೆಯಿಂದಲೆಂದಿಗೂ
ದಿಟಕೇರಲರಿದು. ಸಟೆಯೆನಿತನೊಡ್ಡೈಸಿದಡೆ
ದಿಟದ ಕಿಡಿ ಚಿಮ್ಮುವುದು? ಮಿಥ್ಯೆ ಬಾಹುಳ್ಯದಿಂ
ಸತ್ಯವೆಂತಾಗುವುದು? ಕತ್ತಲೆಯ ಮೊತ್ತಮಂ
ನಾವೆನಿತು ಕಡೆದರೂ ಕಾಂತಿಯಣುವಾದರೂ
ಹೊಮ್ಮುವುದೆ?

ಎದೆಗೆಡದೆ ನಡೆ, ಸಖಿ ಶರಾವತಿಯೆ;
ನಿನ್ನಿನಿಯ ಕಡಲೊಡೆಯನನ್ನರಸಿ ನೀನಾವ
ಕೆಚ್ಚಿನಲಿ ಅಡಿಗಳೊಂಬೈನೂರನೆಣಿಸದೆಯೆ,
ನಲ್ಲಿಯನ್ನರಸುತಿಹ ಧೀರ ಜಿಜ್ಞಾಸು ತಾಂ
ಧೈರ್ಯದಿಂದೆಂತುಟಜ್ಞಾನದಾ ಮೋಹವನು
ಕಲ್ಲುಮನಸನು ಮಾಡಿ ಕಡಿದು ನುಗ್ಗುವನಂತೆ
ಧುಮುಕಿದೆಯೊ, ಮೋಣದೇ ಕೆಚ್ಚಿನಲಿ ಸಹ್ಯಾದ್ರಿ
ಕಂದರಗಳಿಡುಕಿನಲಿ ಹಿಂಜರಿಯದೆಯೆ ನುಗ್ಗು!
ನಿನ್ನ ಮನದನ್ನನನು ನೀನು ಸೇರಲೆ ಬೇಕು!

ನನ್ನಿಯೆಂಬುದು ಕೊರಳಿನಲಿ ಮುಡಿವ ಕೋಮಲದ
ಹೂವಾಲೆಯಲ್ತು, ಎದೆಗಿರಿದುಕೊಳ್ಳಲೆ ಬೇಕೆ
ಬೇಕಾಗಿರುವ ಹೊನ್ನಿನ ಕತ್ತಿ ಎಂಬುದನು
ತಿಳಿದು ನಡೆ ಎದೆಗೆಡದೆ, ಓ ಸಖಿ ಶರಾವತಿಯೆ;
ನಿನ್ನ ಮನದೆಣಿಕೆಯನು ನೀ ಪಡೆದೆ ಪಡೆವೆ!

ನೀಲಿಯಾಕಾಶದಲಿ, ಮಿಡಿದರೊಡೆಯುವುದೇನೊ
ಎಂಬಂದದಲಿ ತೊಳೆದ ತೆಳು ನೀಲಿಗಾಜಿನೊಲು
ತೋರುವಾಕಾಶದಲಿ, ತೊಳಲಿ ಬಹ ಹಾಲ್ನೆನೆಯ
ನೊರೆಮುಗಿಲ ಬೆಳ್ದೆರೆಯ ನಡು, ತೇಲಿಯೈತರಲು
ಹುಣ್ಣಿಮೆಯ ಚಂದಿರನು, ಬೆಟ್ಟ ಬನಗಳ ಮೇಲೆ
ಬೆಳ್ದಿಂಗಳನು ಚೆಲ್ಲಿ; ಕತ್ತಲೆಯನಟ್ಟುತ್ತ,
ಹಕ್ಕಿಗಳನೆಚ್ಚರಿಸಿ ನುಣ್ಚರವ ದನಿಗೈಸಿ,
ಬನದ ಹಸುರಿನ ಸಿರಿಯ ಹೊನ್ನಿನಲಿ ಮಿಾಯಿಸುತ
ಹೊಂದೇರನೇರಿ ಪಗಲಾಣ್ಮನು ದಿಗಂತದಲಿ
ಪೂರ್ವ ಪರ್ವತದುತ್ತಮಾಂಗದಲಿ ವೈದೋರೆ;
ತಿರೆಯೆಲ್ಲವನು ನುಂಗಿ ಕಾಳರಾತ್ರಿಯು ನಿಲಲು
ಮೌನದಲಿ; ಜೌವನವ ಕೊನರಿಸುತ ಬಿಂಕದಲಿ
ವೈಯಾರದಲಿ ಚೈತ್ರನೈತರಲು; ಬಾನಿನಲಿ
ಕರ್ಮುಗಿಲ ಕೆದರುತ್ತ, ಮಿಂಚುಗಳ ಬೀಸುತ್ತ,
ಸಿಡಿಲುಗಳನೆರಗಿಸುತ ಭೋರಿಡುತ ಗರ್ಜಿಸುತ
ಮುಂಗಾರು ಮೊಗದೋರಲಾನೆಮಳೆಗರೆಗರೆದು;
ಚಳಿಗೆ ಕಂಬಳಿ ಹೊದೆದು ಮಾಗಿಯೈತರೆ, ಗಿರಿಯ
ತಪ್ಪಲಲಿ ಮಂಜುಗಳ ಮಂದೆಯನು ಮೇಯಿಸುತ;
ತರಗೆಲೆಯ ತುಳಿದು ಮರ್ಮರನಾದ ಗೈಯುತ್ತ
ಬನದ ತರುಗಳ ನಡುವೆ ಬಿಸಿಯುಸಿರ ಬೇಸಗೆಯು

ದಣಿದುಬರೆ ; ವರ್ಷಸೋಪಾನಗಳನೇರುತ್ತ,
ಯುಗಗಳೆಂಬುವ ಘಟ್ಟದಲಿ ತಂಗಿ ಮುಂಬರಿದು
ಕಾಲದೇವನು ಯಾತ್ರೆಗೈಯುತಿರೆ; ಭಾರತವೊ,
ರಾಮಾಯಣವೊ ಮಿಂಚಿ ಮುಳುಗುತಿರೆ ; ಹರಿ ತನ್ನ
ನಿದ್ದೆಯಲಿ ಜಗದ ಕನಸನು ಕಂಡು ನಲಿಯುತಿರೆ
ನೀ ಧುಮುಕು, ಓ ಸಖಿ ಶರಾವತಿಯೆ, ಇಲ್ಲಿ ಬಹ
ಜನರೆದೆಯ ಕನ್ನಡಿಗೆ ತಗುವ ಬಿಂಬವನಿತ್ತು !
   ನೋಡಿದವರೆದೆಯಲ್ಲಿ ಕಿರಿಯುತನವನು ಅಳಿಸಿ,
ತನ್ನ ಮೀರುವ ಹಿರಿತನಕೆ ಮಣಿದು ಮೈಮರೆವ
ಹಿರಿತನವು ಮೂಡುವಂತೆಸಗುವುದೆ ಹೆಗ್ಗುರುತು
ದಿಟವಾದ ಹಿರಿತನಕೆ. ತನ್ನನೇ ತಾ ಮೀರಿ
ಮುಂಬರಿಯುದಿಹ ಬಾಳು ಮಳಲ ಬಯಲಿನ ಬಾಳು.
ಮಹಿಮೆಯಿರುವುದು ಮಹಿಮೆ ಮೂಡುವಂದದಿ ಮಾಡೆ
ದೊಡ್ಡದಿರುವುದು ಕಿರಿದರೆದೆಯಲ್ಲಿ ದೊಡ್ಡತನ
ಮೊಳೆದೋರುವಂತೆ ಆದರ್ಶವನು ತೋರಿಸಲು.
ಓ ಸಖಿ ಶರಾವತಿಯೆ, ನನ್ನೆದೆಯ ರಂಗದಲಿ
ಹಿರಿಯ ಭಾವಗಳುದಿಸುವಂತೆಸಗಿರುವ ನೀನು
ಹಿರಿಯಳೌ: ನಿನ್ನ ಬಳಿಯೊಳೆ ಕುಳಿತು ಧ್ಯಾನದಲಿ
ಮುಳುಗುವೆನು—ಸತ್ಯಸೌಂದರ್ಯಧಾಮದೆಡೆಗೆ !

# ಬೆಳ್ದಿಂಗಳು

ಮೂಡಲಲಿ ಬನದುಡೆಯ ಪೆರ್ಬೆಟ್ಟದಂಚಿನಲಿ
ಮಗುವಿನೆಳೆನಗೆಯಂತೆ ಬೆಳಕು ಹಬ್ಬಿ
ಮೆಲುಮೆಲನೆ ಮೌನದಲಿ ಬಾಂದಳದೊಳಡಿಯಿಟ್ಟು
ಮೂಡಿದನು ತಣ್ಗದಿರನಿಳೆಯ ತಬ್ಬಿ!
ಮೇಲೆ ಹೊಳೆದುವು ತಾರೆ ; ಬಿಳಿಯ ಮುಗಿಲಲ್ಲಲ್ಲಿ
ಸೊಬಗಿನಲಿ ಸೆರೆ ಸಿಕ್ಕಿ ಚಲಿಸಲಿಲ್ಲ ;
ಸದ್ದಿಲ್ಲದಿರುಳಿನಲಿ ಕೌಮುದಿಯ ಕುಡಿಕುಡಿದು
ಮೈಮರೆತು ಮಲಗಿದುವು ಬನಗಳೆಲ್ಲ!
ಕಬ್ಬಿಗನ ಮಾತುಗಳ ಬಡತನಕೆ ನನ್ನೆದೆಯು
ಮರುಕದಲಿ ಮುಳುಗುತಿರೆ ಮೂಕನಾದೆ!
ಜೊನ್ನದಿಂಪನು ನೋಡಿ, ಜೊನ್ನದೊಳು ತೇಲಾಡಿ
ಜೊನ್ನದಲಿ ಜೊನ್ನಾಗಿ ಕರಗಿಹೋದೆ!

# ಬೈಗಿನಲ್ಲಿ

ಉರಿದು ಉರಿದು ಉರಿದು ಸಂಜೆ
ಮೆಲ್ಲಮೆಲ್ಲನಾಯ್ತು ಬಂಜೆ;
ಮುಗಿಲು ಮಾಗಿ, ಬಣ್ಣ ಪೋಗಿ,
ಬೂದಿಯಾಗುತಿದ್ದಲಾಗಿ,
ನಿಶಿಯ ಮಸಿಯ ಮುದ್ದೆ ಬಿತ್ತು;
ಭುವನ ಕವನವಳಿಸಿದತ್ತು !

ಆದರದೋ ಮೇಲೆ ನೋಡು !
ನೂರುತಾರೆ, ಸಗ್ಗ ವೀಡು !
ಕಾಂತಿ ಕಾಣದಿರುವ ನನ್ನಿ
ಅಂಧಕಾರ ಸುಲಭವೆನ್ನಿ !
ಸಾವು ನನ್ನನಳಿಸಲಿಲ್ಲಿ
ತಾರೆಯಾಗಿ ಹೊಳೆವೆನಲ್ಲಿ !

# ಶಾಂತಿ ಬರುವಳು

ಮೂಡುದೆಸೆಯ ಬೆಟ್ಟದುದಿಯನೇರಿ ನೇಸರೆಸೆವ ಮುನ್ನ,
ಬೆಳಕು ತಿಳಿಯ ಬಾನಿನಿಂದ ತುಳುಕಿ ಭೂಮಿಗಿಳಿವ ಮುನ್ನ,
ಹಂಡಹಕ್ಕಿ ಸಿಳ್ಳಿನಿಂದ ಜಗವನೆಳ್ಚರಿಸುವ ಮುನ್ನ,
ಹರಿಯುವಿರುಳ ಮಡಿಲಿನಿಂದ ಶಾಂತಿ ಚಿಮ್ಮಿ ಬರುವಳು !

ಕಣ್ಣು ಹೋಹ ಕಡೆಗಳಲ್ಲಿ ತಳಿರು ಹೂವು ಮೊಗ್ಗು ಮೆರೆಯೆ,
ಬಳ್ಳಿಗಳಲಿ ಮರಗಳಲ್ಲಿ ಹಕ್ಕಿ ಬಳಗ ಹಾಡಿ ಕರೆಯೆ,
ಹೊಳೆವ ಹಿಮದ ಮಣಿಗಳೆಲ್ಲ ಎಳೆಯ ಬಿಸಿಲಿನಲ್ಲಿ ಮಿರುಗೆ,
ನನೆಯ ಕೊನೆಯ ತೊಟ್ಟಿಲೇರಿ ಶಾಂತಿ ನಗುತ ಬರುವಳು !

ಸದ್ದೆ ಇಲ್ಲದಿರುಳಿನಲ್ಲಿ ಮಲೆಗಳೆಲ್ಲ ಮಲಗಿ ಇರಲು,
ಹಿಂಡನಗಲಿ ಬಂದ ಮುಗಿಲು ಇಲ್ಲಿ ಅಲ್ಲಿ ಅಲೆಯುತಿರಲು,
ಮರದ ಕರಿಯ ನೆರಳಿನಲ್ಲಿ ಮಿಣುಕು ಹುಳುಗಳಿಣುಕುತಿರಲು,
ಚಂದ್ರಕಿರಣತತಿಯಮೇಲೆ ಶಾಂತಿ ತೇಲಿ ಬರುವಳು !

ಬಾಳ ಬಲೆಯ ನಡುವೆ ಸಿಲುಕಿ ಜೀವ ಬರಿದೆ ನೋಯುತಿರಲು
ಬಗೆಯು ಕದಡಿ, ಬೆಪ್ಪುಹೆಚ್ಚಿ, ತಿಳಿವು ಬಟ್ಟೆಗೆಡುತಲಿರಲು,
ದೇವನೆದೆಯ ನಿಲಯದಲ್ಲಿ ಕುಣಿವ ದನಿಯ ನೆನಪು ಬರಲು,
ಸೊಗದ ಬಾಗಿಲೊಡೆದುಕೊಂಡು ಶಾಂತಿ ನಗುತ ಬರುವಳು !

# ಮನ್ನಿಸಿ ನನ್ನಪರಾಧವನು

ಕಬ್ಬಿಗರರಿಯದೆ ಕೀರ್ತಿಯ ಪಡೆಯದ,
ಕಾವ್ಯರಂಗದಲಿ ನಲಿ ನಲಿದಾಡದ,
ರಸಿಕರ ಕಂಗಳ ಬೆಳಕಿಗೆ ಬೀಳದ,
ಸುಂದರ ತರುಗಳೆ, ಸುಂದರ ಮೃಗಗಳೆ,
ಸುಂದರ ಸುಮಗಳೆ ಪಕ್ಷಿಗಳೆ,
ಮನ್ನಿಸಿ ಕವಿಗಳ ಪಾಪವನು;
ಮುನಿಗಳೆ ಕೊಡದಿರಿ ಶಾಪವನು!
ಮರೆತಿರೆ ನಾ ಹಾಡಿಹ ಕವನಗಳಲಿ
ಮನ್ನಿಸಿ ನನ್ನಪರಾಧವನು!
ನಿಮ್ಮನು ಮಲೆನಾಡಿನ ಬಣ್ಣನೆಯಲಿ
ತೊರೆದರೆ ನಾನೆ ನರಾಧಮನು!
ಗೆಳೆಯನು, ಶಿಷ್ಯನು, ದಾಸನು ನಿಮಗೆ;
ಗುರುಗಳು ಪೂಜ್ಯರು ನೀವೆನಗೆ!
ಚಿರಋಣಿಯಾಗಿಹೆ ನಾ ನಿಮಗೆ!
ನೇಹಿಗರಿಲ್ಲದೆ ಬೇಸರಗೊಂಡಿರೆ,
ಏಕಾಂಗಿಯಾಗಿ ನಾ ತೊಳಲುತಲಿರೆ
ಸಂತಸವಿತ್ತಿರಿ ಜತೆಗೂಡಿ!
ಲೋಕದ ಮೋಹದ ಮಾಯೆಯ ಬಲೆಯಲಿ
ಹೊಲಬುಗೆಟ್ಟು ನಾ ಬರಿದೆ ತಿರುಗುತಿರೆ
ಕರುಣಿಸಿ ದಾರಿಯ ತೋರಿದಿರಿ!
ಕತ್ತಲು ಕವಿತರೆ, ಬೆದರುತಲೆದೆಯಿರೆ,
ಶಾಂತಿಯ ಕಾಂತಿಯ ನೀಡಿದಿರಿ!
ತವಸಿಗಳರಿಯದೆ, ಸಾಧಿಸಿ ಬಯಸುವ
ಸತ್ಯದ ನೆಲೆಯನು ಬಡ ಕಬ್ಬಿಗನಿಗೆ
ಒಲ್ಮೆಯ ದಾನವ ಮಾಡಿದಿರಿ!

ಹಿಂದೆಯು ನೆಚ್ಚಿದೆ, ಮುಂದೆಯು ನೆಚ್ಚುವೆ,
ಮಾರ್ಗದರ್ಶಿಗಳು ನೀವೆನಗೆ.
ದೇವನ ರೂಪವ ಕಾಣುವೆ ನಿಮ್ಮಲಿ,
ದೇವನ ವಾಣಿಯ ಕೇಳುವೆ ನಿಮ್ಮಲಿ,
ನಿಮ್ಮನುಭವದಲಿ ಶಿವನನುಭವವಿದೆ,
ದೇವನ ಪ್ರತಿನಿಧಿಗಳು ನೀವು!
ತರುಗಳೆ, ಸುಮಗಳೆ, ಮೃಗಗಳೆ, ಖಗಗಳೆ,
ನಿಮಗಿದೊ ನಮಿಸುವೆ ಭಕ್ತಿಯಲಿ!

# ಕಾಜಾಣ

ಕೋಗಿಲೆಯಂತೆಯೆ ಬಣ್ಣವು ನಿನಗಿದೆ,
ಕೋಗಿಲೆಯಿಂಚರಕಿಮ್ಮಡಿಯಿಂಚರ!
ಕೋಗಿಲೆಗೆಲ್ಲಿದೆ ನಿನಗಿರುವಂತಹ
ಪುಕ್ಕದ ನೇಲುವ ಗರಿಯೆರಡು?
ಕೋಗಿಲೆಯಿನಿದನಿಯೊಂದೇ ಆಗಿದೆ
ನಿನ್ನದು ಬಹು ವಿಧವಾಗಿಹುದು!
ಕೋಗಿಲೆಯಂದದಿ ಹೆರವರ ಮನೆಯಲಿ
ಹುಟ್ಟಿದ ತಬ್ಬಲಿ ನೀನಲ್ಲ!
ಕೋಗಿಲೆಯಂದದಿ ಹೊಲಸನು ತಿನ್ನುವ
ಕಾಗೆಗೆ ನೀ ಋಣಿಯಾಗಿಲ್ಲ!
ಶೂದ್ರನೆ ಹುಟ್ಟಿಸಿ, ಶೂದ್ರನೆ ಬೆಳೆಯಿಸಿ,
ಶೂದ್ರನು ಕೊಟ್ಟಾಹಾರವ ತಿಂದಿಹ
ಕೋಗಿಲೆಗೆಲ್ಲಿಯ ದ್ವಿಜತನವು?
ಕಾಗೆಯ ಮರಿಗಳ ಸಂಗದಿ ಬಳೆದಿಹ
ಆ ಪರಪುಟ್ಟನು ನಿನಗೆಣೆಯೆ?
ಬನದೆಲೆವನೆಯಲಿ ರಿಸಿಕುವರರವೊಲು
ಜನಿಸಿದ ಪರಿಶುದ್ಧಾತ್ಮನು ನೀನಹೆ;
ಸಾಟಿಯೆ ನಿನಗಾ ದೇಸಿಗನು?
[ ಮನ್ನಿಸು ಕೋಗಿಲೆ! ಕೂಗುವೆ ಏತಕೆ?
ಹೆರರನು ಹೊಗಳಲು ನಿನ್ನನು ಬೈದೆನೆ?
ಮನ್ನಿಸು ಕವಿಯಪರಾಧವನು!
ನಿಶೆಯಲ್ಲೇತಕೆ ಕೂಗುತಿಹೆ?
ಬೆಳಗುವ ತಿಂಗಳ ಬೆಳಕಿಲ್ಲ!
ತಿರೆಯನು ಸಿಂಗರಿಸೈತಹ ಪೆಂಪಿನ
ಸುಗ್ಗಿಯು ಬಂದಿಹ ಕನಸಾಯ್ತೆ?

ಹಿಂದಿನ ಹರುಷದ ನೆನಸಾಯ್ತೆ ?
ಹೆಮ್ಮೆಯೆ ಮಧುನೃಪ ಬಂದಿಹನೆಂದು ?
ಚೈತ್ರನು ಶಿಶಿರನ ಕೊಂದಿಹನೆಂದು ?
ಸಂತಸವೇ ಸೆರೆ ತೊಲಗಿತು ಎಂದು ?
ಸೊಕ್ಕೇ ಬಿಡುಗಡೆ ದೊರಕಿತು ಎಂದು ?
ಇತರರ ಸೊಬಗನು ಬಣ್ಣಿಸಲಿನಿಯನು
ಕರುಬುವ ಹೆಣ್ಣಿನ ತೆರದಿಂದೆ,
ಕಾಜಾಣವ ನಾ ಬಣ್ಣಿಸುತಿದ್ದರೆ
ಮಚ್ಚರವೇತಕೆ ನಿನಗೆಲೆ ಹಕ್ಕಿ ?
ಗುಣವಿರುವೆಡೆ ಮತ್ಸರವೇಕೆ ?
ಹಿಂದೆಯೆ ನಿನ್ನನು ಹೊಗಳಿಹೆನಲ್ಲಾ :
ಸಾಲದೆ ಮಾಡಿಹ ಹೊಗಳಿಕೆಯೆಲ್ಲಾ ?
ರಾತ್ರಿಯ ಕಾಲದೊಳೂಳುವುದೇತಕೆ ?
ಗೂಬೆಯ ಜಾತಿಯೆ ನೀನೇನು ?
ಕಬ್ಬಿಗರೆಲ್ಲರು ಹೊಗಳಿಹರೆಂದು
ಹೆಮ್ಮೆಯು ತಲೆಗೇರಿರುವುದೆ ಇಂದು ?
ಮುದ್ದಿನ ಕೋಗಿಲೆ, ನಚ್ಚಿನ ಕೋಗಿಲೆ,
ಕಬ್ಬಿಗರೊಲ್ಮೆಯ ಕೋಗಿಲೆಯೆ !
ಹೊಗಳಿದೆನಲ್ಲವೆ ? ಸುಮ್ಮನಿರು !
ಕಾಜಾಣವ ನಾ ಬಣ್ಣಿಪೆ ಕೇಳು !
ಪರರೊಳ್ಪಸದಲಿ ಸಂತಸ ತಾಳು ! ]
ಕಾಜಾಣವೆ, ಕೋಗಿಲೆಗಿರುವಂದದಿ
ಮಾಗಿಯ ಬಂಧನ ನಿನಗಿಲ್ಲ !
ಸೆರೆಬಿಡಿಸಲು ಮಧು ಬರುವನು ಎಂಬಾ
ಬಯಕೆಯ ದಾಸ್ಯವು ನಿನಗಿಲ್ಲ !

ನಿತ್ಯ ವಿಮುಕ್ತನೆ ನಿಜ ನೀನು!
ನೀನಿಂತಿರುತಿರೆ, ಕಬ್ಬಿಗರಂದು,
ಕಬ್ಬಿಗರೆನ್ನಿಸಿಕೊಳ್ಳುವರಿಂದು,
"ಕೋಗಿಲೆ! ಕೋಗಿಲೆ! ಕೋಗಿಲೆ" ಎಂದು
ಕೂಗುವರೇಕೋ ನಾನರಿಯೆ!
ನಾನೂ ಕೂಗಿದೆ ನಿನ್ನನು ಮರೆತು;
ಮರೆಯೆನು ನಾನಿನ್ನೆಂದೆಂದು!
ಬನಗಳಲೊರ್ವನೆ ಕುಳಿತಿರುವಾಗ,
ಕವಿತೆಯ ಬರೆದುಲಿಯುತಲಿರುವಾಗ,
ಮರಗಳ ನೆತ್ತಿಯನೇರುತ ನಾನು
ಸುತ್ತಣ ಸೊಬಗನು ಬಣ್ಣಿಸುವಾಗ,
ನಿನ್ನಿಂಚರವನು ಕೇಳಿಹೆನು,
ಹಿಗ್ಗುತ ಮುದವನು ತಾಳಿಹೆನು.
ಪಿಕ ಪಾಡಿದರೇನಾಗುವುದಂತೆಯೆ
ನಿನ್ನಿಂಚರದಿಂದಾಗುವುದು!
ನೀ ಮಲೆನಾಡಿನ ಕೋಗಿಲೆಯು!
ಹೆಮ್ಮೆಯನರಿಯದ ಕೋಗಿಲೆ ನೀನು!
ಕೋಗಿಲೆ ಎನೆ ವೈಯಾರದ, ಬೆಡಗಿನ,
ಬಿಂಕದ ಕಾಜಾಣವು ತಾನು!

# ದೋಣಿ ಹಾಡು

ದೋಣಿ ಸಾಗಲಿ, ಮುಂದೆ ಹೋಗಲಿ, ದೂರ ತೀರವ ಸೇರಲಿ!
ಬೀಸುಗಾಳಿಗೆ ಬೀಳುತೇಳುವ ತೆರೆಯ ಮೇಗಡೆ ಹಾರಲಿ!

ಹೊನ್ನ ಗಿಂಡಿಯ ಹಿಡಿದು ಕೈಯೊಳು ಹೇಮವಾರಿಯ ಚಿಮುಕಿಸಿ,
ಮೇಘಮಾಲೆಗೆ ಬಣ್ಣವೀಯುತ ಯಕ್ಷಲೋಕವ ವಿರಚಿಸಿ,
ನೋಡಿ, ಮೂಡಣದಾ ದಿಗಂತದಿ ಮೂಡುವೆಣ್ಣಿನ ವೈಸಿರಿ
ರಂಜಿಸುತ್ತಿದೆ! ಚೆಲುವೆಯಾಕೆಗೆ ಸುಪ್ರಭಾತವ ಬಯಸಿರಿ!

ಕೆರೆಯ ಅಂಚಿನ ಮೇಲೆ ಮಿಂಚಿನ ಹನಿಗಳಂದದಿ ಹಿಮಮಣಿ
ಮಿಂಚುತಿರ್ಪುವು ಮೂಡುತೈತರೆ ಬಾಲಕೋಮಲ ದಿನಮಣಿ!
ಹಸುರು ಜೋಳದ ಹೊಲದ ಗಾಳಿಯು ತೀಡಿ ತಣ್ಣಗೆ ಬರುತಿದೆ,
ಹುದುಗಿ ಹಾಡುವ ಮತ್ತಕೋಕಿಲ ಮಧುರವಾಣಿಯ ತರುತಿದೆ!

ದೂರ ಬೆಟ್ಟದ ಮೇಲೆ ತೇಲುವ ಬಿಳಿಯ ಮೋಡವ ನೋಡಿರಿ;
ಅದನೆ ಹೋಲುತ, ಅಂತೆ ತೇಲುತ ದೋಣಿಯಾಟವನಾಡಿರಿ!
ನಾವು ಲೀಲಾಮಾತ್ರ ಜೀವರು, ನಮ್ಮ ಜೀವನ ಲೀಲೆಗೆ!
ನಿನ್ನೆ ನಿನ್ನೆಗೆ, ಇಂದು ಇಂದಿಗೆ, ಇರಲಿ ನಾಳೆಯು ನಾಳೆಗೆ!

# ಸ್ವರ್ಗವೆ, ಭೂಮಿಯೊಳಿರದಿರೆ ನೀನು

ಸ್ವರ್ಗವೆ, ಭೂಮಿಯೊಳಿರದಿರೆ ನೀನು
ಮೇಣೆಲ್ಲಿಯು ನೀನಿಲ್ಲಾ ! ಇಲ್ಲಾ !

ದೇವತೆಗಳು ನಾವಾಗಲಾರದಿರೆ
ದೇವತೆಗಳು ಇನ್ನಿಲ್ಲಾ ; ಇಲ್ಲಾ !
ಅಪ್ಸರಿಯರು ನಾವಾಗಲಾರದಿರೆ
ಅಪ್ಸರಿಯರು ಬೇರಿಲ್ಲಾ, ಇಲ್ಲಾ !

ಮೊರೆ ಮೊರೆಯುತ ಓಡುವ ಈ ತೊರೆಯಿರೆ,
ತೆರೆಗಳ ತುದಿಯಲಿ ತಿರುಗುವ ನೊರೆಯಿರೆ,
ಹಸುರು ಬನಗಳಲಿ ಹೂಬಿಸಿಲೊರಗಿರೆ,
ಕೋಮಲ ರವಿಯಿರೆ, ನಾಕವು ಈ ಧರೆ!

ಸುಗ್ಗಿಯ ಸೊಬಗಲಿ ತಿಂಗಳ ಬೆಳಕಲಿ
ಸಗ್ಗವು ಬಿದ್ದಿರುವುದು ಅಲ್ಲಲ್ಲಿ!
ಕಬ್ಬಿಗನಿಂಚರ ಸೊದೆಯುಂಡು ಚೆಲ್ಲಿ
ಸಗ್ಗವ ಮಾಳ್ಪನು ಈ ಬುವಿಯಲ್ಲಿ!

# ದನಗಾಹಿ

ಮೌನವಿರೆ ಬಾನಿನಲಿ, ನಿದ್ದೆಯಿರೆ ಬನಗಳಲಿ,
ಬಿಸಿಲು ಮಲಗಿರೆ ಹಸುರು ಬಯಲಿನಲ್ಲಿ;
ಸಾಡದ್ದಿರಲು ಹಗಲ ನಡುನಿದ್ದೆಗನಸಿನಲಿ;
ಜೋಂಪಿಸುತ್ತಿಹ ಮರದ ಮನಸಿನಲ್ಲಿ
ನೆರಳೊಂದು ಕನಸಿನಂತಿರೆ; ತೇಲಿ ನೆಳಲಿನಲಿ,
ಕರಿಯ ಕಿರುಬಂಡೆಗಳ ತೆರದೊಳಲ್ಲಿ
ಮಲಗಿ ತುರುಗಳು ಮೆಲುಕು ಮೇಯುತಿರೆ; ಕೊಳಲೂದಿ
ನಲಿಯುವೆಲೆ ದನಗಾಹಿ, ತಿರೆಯೊಳಿಲ್ಲಿ
ನಿನಗೆ ದೊರಕುವ ಸೊಗದ ಮೈಮೆಯನು ಬಲ್ಲೆಯೇನು?
ನೀನರಿಯದಿರಬಹುದು! ನಾನದನು ತಿಳಿಯೆನೇನು?
ನಡೆ ಪಟ್ಟಣಕೆ; ಅಲ್ಲಿ ಸಂತೆಗಳ ನಡುವೆ ಸಿಕ್ಕಿ
ನೀನುಳಿದ ಸೊಗವ ನೆನೆದಳಬಹುದು ಬಿಕ್ಕಿ ಬಿಕ್ಕಿ!

# ನಡುಹಗಲು

ಬೇಸಗೆಯು ಬಂದೆನ್ನ ಪರ್ಣಶಾಲೆಯ ಮುಂದೆ
ಬಣ್ಣದ ಕನಸುಗಳನು ಹೆಣೆಯುತಿಹುದು ;
ಬೇಸತ್ತ ಬಿಸಿಯುಸಿರು ಮರದ ತಳಿರೊಳು ಹುದುಗಿ
ಸೋಮಾರಿಯಂತೆ ಕನವರಿಸುತಿಹುದು.
ಹಕ್ಕಿಗಳ ಸರವಿಲ್ಲ; ಜಂತುಗಳ ಸುಳಿವಿಲ್ಲ;
ಜಗದ ಜೀವದ ಕರ್ಮ ಕುಗುರುತಿಹುದು.
ನನ್ನೆದೆಯ ಆಳದಲಿ ಪಿಸುಮಾತುಗಳು ಸೇರಿ
ಏನನೋ ಒಳಸಂಚು ನಡೆಸುತಿಹವು!
ಗುಡಿಯ ಹೊಸಲೊಳು ಕುಳಿತು ಶೂನ್ಯ ದಿಗ್ದೇಶವನು,
ನಾನರಿಯೆ, ಸುಮ್ಮನೆಯೆ ನೋಡುತಿರುವೆ !
ನೀನು ಬಳಿಯೊಳೆ ಕುಳಿತು ಕಬ್ಬಿಗನನೀಕ್ಷಿಸುತ
ಮುದ್ದಿನ ಮುಗುಳ್ನಗೆಯ ಬೀರುತಿರುವೆ !

# ಕಿಟ್ಟೈಯ್ಯ

ಆನಂದನೊಡಗೂಡಿ ಸಂಜೆಯಲಿ ಸಂಚರಿಸೆ
ಆಶ್ರಮವನುಳಿದು ಪಡುವಣದೆಸೆಗೆ ತಿರುಗಿದೆನು,
ಒಂಟಿಕೊಪ್ಪಲಿನಾಚೆ ಹಬ್ಬಿರುವ ದಿಬ್ಬಕ್ಕೆ.
ದಾರಿಯಲಿ ಅದನಿದನು ಕುರಿತು ಮಾತಾಡುತ್ತ,
ನಡು ನಡುವೆ ಹಿಂತಿರುಗಿ ಗಗನ ಪಟಕೆದುರಾಗಿ
ಹಿರಿಗನಸಿನಂತೆ ಮಲಗಿದ್ದ ಚಾಮುಂಡಿಯನು
ಬಣ್ಣಿಸುತ, ಅಲ್ಲಲ್ಲಿ ನಿಂತು ಸುತ್ತಲು ತಿರುಗಿ
ದೂರದ ದಿಗಂತದಲಿ ನೀಲಿಜವನಿಕೆ ಹೊದೆದು
ಹಬ್ಬಿದ್ದ ಗಿರಿಶಿಖರ ರೇಖೆಯನು ನುತಿಸುತ್ತ,
ಬಯಲಿನಲಿ ನೆರಳೊ ನಿರುತವೊ ಎಂಬ ಸಂಶಯವ
ಮನಕೊಡರಿಸುವ ತೇನೆಹಕ್ಕಿಗಳನೆಬ್ಬುತ್ತ,
ಹಾರಲವುಗಳನೆಣಿಕೆಗೈದು ಉರೆ ಹಿಗ್ಗುತ್ತ
ಗಾಳಿಯಿಲ್ಲದ ಹಗಲ ಗಗನದ ಮುಗಿಲಿನಂತೆ
ಗೊತ್ತುಗುರಿಯಿಲ್ಲದೆಯೆ ತೇಲಿದೆವು. ಹೋಗುತಿರೆ
ಮುಂದೆ ಹಾದಿಯು ಕವಲಿದೆಡೆ, ಎಡದ ರೆಕ್ಕೆಯನು
ಹಿಂದಿಕ್ಕಿ ಬಲದ ರೆಕ್ಕೆಯ ಹಿಡಿದು, ಹೊಲಗಳೆಡೆ
ಇಕ್ಕೆಲದ ಪಾಪಾಸುಕಳ್ಳಿ ಬೇಲಿಯ ಮಧ್ಯೆ
ಹರಟುತ್ತ ಸಾಗಿ ಬರೆ ಬರೆ, ಮುಂದೆ ನಿಮಿರಿದುದು
ಕಿರುದಿಬ್ಬವೊಂದು. ಅದನೇರಿದೆವು ಎತ್ತರದಿ
ನಿಂತು ನೋಟವ ನೋಡುವಾನಂದದತಿಶಯದಿ.
ಆ ಎಡೆಯನಡರಿದೆವು. ಮೂರೆರಡು ಬಂಡೆಗಳು,
( ಕರಿಯ ಬಣ್ಣದ ಸಣ್ಣ ಕೋಣದಂತಿದ್ದುವವು )
ಅಲ್ಲಿರಲು ನಾವು ನಿಂತೆವು. ನಿಂತು ನೋಡಿದೆವು :
ನಮ್ಮ ಬಲ ಭಾಗದಲಿ ಮೈಸೂರು, ಚಾಮುಂಡಿ ;
ಎದುರಿನಲಿ ಉತ್ತು ಬಿತ್ತಿದ ಹೊಲದ ಹಸುರಿನಲಿ

ಅಲ್ಲಲ್ಲಿ ಬೆಳೆದ ಮರಗಳು; ದೂರ ದೂರದಲಿ
ಅಲೆಯೇರಿ ಹಾರಿಬಹ ಬಯಲುಸೀಮೆಯ ಭೂಮಿ ;
ಎಡದ ಭಾಗದಲೊಂದು ಹಿರಿಯ ದಿಣ್ಣೆಯ ಬೋರೆ
ಸಂಜೆಗೆಂಪಿನ ಬಾನಿಗೆದುರಾಗಿ ಹಬ್ಬಿತ್ತು ;
ಹಿಂದುಗಡೆ ಹೊಲ, ಹಳ್ಳಿ. ಆ ಸೊಬಗು, ಆ ಶಾಂತಿ,
ಆ ಮಧುರ ನಿರ್ಜನತೆ, ಹಲಕೆಲವು ಪಕ್ಷಿಗಳ
ಕೂಜನದಿ ಹೊರೆಯೇರುತಿದ್ದ ಆ ನೀರವತೆ,
ಎಲ್ಲವೂ ಭವ್ಯತೆಯ ಸೀಮೆಯಲಿ ನೆಲಸಿತ್ತು!
ಕಬ್ಬಿಗನು ಕತೆಗಾರರಿಬ್ಬರೂ ಮಾತುಳಿದು
ಗಾಢವಾಗುತಲಿದ್ದ ಧ್ಯಾನದಲಿ ಮುಳುಗಿದರು!
ಇಂತಿರಲು "ಕೂತುಕೊಳ್ಳೀ ಬುದ್ದಿ!" ಎಂಬ ದನಿ
ಧ್ಯಾನದಿಂದೆಮ್ಮನೆಬ್ಬಿಸಿತು. ನೋಡಿದರಲ್ಲಿ,
ಮೊರಡು ಮೊರಡಾಗಿ ಬಳಿಯಿದ್ದ ಹೊಲದಂತರದಿ,
ಸ್ವರ್ಣವರ್ಣದ ಲಕ್ಷ ಪುಷ್ಪಗಳ ಶೋಭೆಯಲಿ
ಮೆರೆದಿದ್ದ ಹುಚ್ಚೆಳ್ಳು ಗಿಡಗಳಾ ಹೊಲದಲ್ಲಿ,
ರೈತನೊಬ್ಬನು ತನ್ನ ಕಾರ್ಯದಲಿ ತೊಡಗಿದುದು
ಕಣ್ಗೆ ಬಿತ್ತು. ನಮ್ಮ ಪ್ರಶ್ನೆಗೆ ಅವನು ಮತ್ತೊಮ್ಮೆ
"ಕೂತುಕೊಳ್ಳೀ ಬುದ್ದಿ! ಹವವು ಚೆನ್ನಾಗಿಹುದು!"
ಎಂದುಸುರಿ, ಮರಳಿ ರಾಗಿಯ ಗಿಡಗಳನು ಕೊಯ್ದು
ರಾಶಿ ಹಾಕುವ ತನ್ನ ಕರ್ಮದಲಿ ತೊಡಗಿದನು.
ಆ ವಾಣಿಯಾಹ್ವಾನದಲಿ ಎನಿತು ಸರಳತೆ,
ಎನಿತು ಆದರವೆನಿತು ವಾತ್ಸಲ್ಯವೆನಿತೊಲ್ಮೆ!
ಆ ಮಾತಿನಾ ಮೋಹದಿಂಪಿನಲಿ ಸೆರೆಸಿಕ್ಕಿ
ಮರುಳಾಗಿ ಮುಗ್ಧಭಾವದಿನಲ್ಲಿ ಕುಳಿತುಬಿಡೆ,
ಮೆಲುಮೆಲನೆ ಮಾತು ತೆಗೆದನು ನೇಗಿಲಿನ ಯೋಗಿ.

ಕಿವಿಗಳಾ ಹೊಲದ ವಾಣಿಯನಾಲಿಸುತಲಿರಲು
ಕಣ್ಗಳವಲೋಕಿಸಿದುವಾ ಪುಣ್ಯಮೂರ್ತಿಯನು
ಹನಿತುಂಬಿ ಆತ್ಮೀಯತೆಯಲಿ:—ವರುಷಗಳಿಂದ
ನಯಜೀವನದ ಮೃದುಲ ಸುಖಗಳನು ಕಾಣದೆಯೆ
ರೂಕ್ಷವಾಗಿರುವ ಮೈ ; ಆದರೂ ಆ ಕರಿಯ
ಬಣ್ಣದಲಿ ಬಲ್ಮೆಯಿರದಿರಲಿಲ್ಲ. ನೂರಾರು
ನೋವುಗಳ ಸಹಿಸಿ ಮೊರಡಾದ ಮುಖ ; ಆದರೂ
ಮಾನವ ಮಹಾಗುಣಗಳಿಗೆ ಬೀಡು ಎನಲಹುದು.
ಬಹು ಕಾಲ ಹೊಲಗೆಲಸದಲಿ ಬೇಸರದೆ ತೊಡಗಿ
ಕಷ್ಟವನೆ ಸುಖವೆಂದು ತಿಳಿದಿರುವ ಒರಟು ಕೈ—
ಭಾರತದ ನಾಕದಲಿ ಕಲ್ಪಭೂರುಹದ ಕೈ !
ಆತನಾ ಕಣ್ಣುಗಳೊ ಪಾತಾಳದಲಿ ಕುಳಿತು
ಸ್ವರ್ಗದ ಅಸೀಮತೆಯನೀಕ್ಷಿಸಿ ನಿರೀಕ್ಷಿಸುವ
ತೆರದಿನಿದ್ದುವು. ತಲೆಯೊ ತೈಲವನೆ ಕಾಣದೆಯೆ
ಮುಡಿಗೆದರಿಕೊಂಡಿತ್ತು. ಕೆಂಪು ವಸ್ತ್ರವದೊಂದು
ಸುತ್ತಲಾರದೆ ಅದನು ಮುತ್ತಿಕೊಂಡಂತಿತ್ತು !
ಅವನ ಮೈಯಲಿ ಹರಕು ಅಂಗಿ ; ಮೊಳಕಾಲಿನಲಿ
ಚಿಂದಿ ಪಂಚೆ : ಆ ಮನೋಹರ ಮಂಗಳದ ಮೂರ್ತಿ !
ಮುಳುಗುತಿಹ ಕನಕಮಯ ಸಂಧ್ಯೆಯು ದಿವಾಕರನು,
ಬೈಗುವೆಣ್ಣಿನ ಕುಂಕುಮದ ಮಂಗಳಾರತಿಯು,
ನೀಲಿಮೆಯ ಪ್ರಾಂತದಲಿ ಗಗನದಾನಂತ್ಯದಲಿ
ದೂರ ಬಹುದೂರದಲಿ ಋಜುಕುಟಿಲ ಪಙ್ಕ್ತಿಯಲಿ
ತಮ್ಮ ಹಕ್ಕಿಯ ನೆನೆದು ಬೇಗ ಬಹು ಬೇಗದಲಿ
ತೇಲಿ ಹಾರುತ ಹರಿವ ಧವಳಿಮ ಬಲಾಕಗಳು,
ಓ ಆ ದಿಗಂತದಲಿ ಭವ್ಯತೆಯ ರೂಪಿನೊಲು

ಮೇಲಿದ್ದಿರುವ ಪಾವನತರ ಚಾಮುಂಡಿ ಗಿರಿ,
ಎಲ್ಲವನು ಗೌರವದಿ ಮೀರಿ ಮಿಗಿಲೆನಿಸಿ ಆ
ಹಸುರು ಹುಚ್ಚೆಳ್ಳೊಲದ ಪುಷ್ಪಿತ ಹರಿದ್ರದಲಿ
ರೈತನೆಸೆದನು ತನ್ನ ಶುಭದ ದಾರಿದ್ರ್ಯದಲಿ !
ಮಿಸುನಿ ಮಳೆ ಸುರಿಸಿ, ಹಸುರಲಿ ಹೊನ್ನ ಹೊಳೆ ಹರಿಸಿ
ಮಾರ್ಗಶೀರ್ಷ ಪ್ರಭಾತದ ಕನಕ ರವಿ ಮೂಡೆ
ಮೂಡಲಲಿ ಹೊಲಕೆ ಬಂದಾತನಿಗೆ ನುಡಿವೆನೆನೆ
ತೆರಪಿಲ್ಲ ; ತೆರಪಿದ್ದರೂ ನುಡಿಯೆ ಜನವಿಲ್ಲ.
ಮೌನದಲಿ ದುಡಿದುಡಿದು ಬಳಲಿದಾತನು ನಮ್ಮ
ಕಂಡೊಡನೆ ಸಂತೋಷದಿಂದ ಸಾದರದಿಂದ
ಸ್ವಾಗತವನಿತ್ತು, ತನ್ನಾ ಹೊಲವೆ ತನ್ನ ಮನೆ
ಎಂಬ ನಂಬುಗೆಯಿಂದ ಕರೆದು ಸ್ವಾಗತವಿತ್ತು,
ಮೆಲುಮೆಲನೆ ಮಾತು ತೆಗೆದನು ನೇಗಿಲಿನ ಯೋಗಿ !
ಕೆಲವು ಪುಡಿನುಡಿಗಳಿಗೆ ಮಾರುತ್ತರಂಗೊಟ್ಟು
ಮೈತ್ರಿಯಲಿ ಮರಳಿ ಕೇಳಿದೆನವನ ಬಡತನದ
ಸಂಸಾರ ಕಥನವನು : ನಿನಗೆನಿತು ಭೂಮಿಯಿದೆ ?
ನೀವೆನಿತು ಮಂದಿ ಮನೆಯಲಿ ? ನಿನಗೆ ಸೋದರರು
ಇಹರೇನು ? ಮಕ್ಕಳೆನಿತಿಹರು ? ಜೀವನವೆಂತು ?
ಸಾಲ ಸೂಲಗಳೊಳವೆ ? ಕಾಲ್ನಡೆಗಳೆನಿತಿಹವು ?
ಇತ್ಯಾದಿ. ಅದಕವನು ಕಟ್ಟೆಯೊಡೆದಂದದಲಿ
ಕಥೆಯ ನದಿ ಹರಿಸಿದನು ಕುಗ್ರಾಮ ಭಾಷೆಯಲಿ,
ಕಾವ್ಯವಾಣಿಗೆ ನಿಲುಕಲಾರದಾವೇಶದಲಿ.
ಮಾನವರು ನಾವಿರಲಿ, ವಿಶ್ವವೇ—ಕಲ್ಮಣ್ಣು,
ಮುಚ್ಚಂಜೆ, ಗಿಡು ಮರಗಳಾಗಸವೆ ಮೊದಲಾದ
ಪ್ರೇಕ್ಷಕ ಮಹಾಶಯರು ಎಲ್ಲರೂ, ಲೋಭದಲಿ

ಕಿವುಡಾದ ಶ್ರೀಮಂತರನ್ನುಳಿದು ಎಲ್ಲರೂ
ನಿಶ್ಶಬ್ದರಾಗಿ ಆಲಿಸಿದರಾ ಸುಖದುಃಖ
ಮಿಶ್ರ ಇತಿಹಾಸವನು, ಬಡವನ ಪುರಾಣವನು,
ಭಾರತಿಯ ಕಂಠದಲಿ ಮಿಡುಕುವ ಪರಾಣವನು :
“ ಮೂರು ಎಕ್ಕರೆ ಭೂಮಿ ನನಗಿಹುದು, ಬುದ್ದಿ. ಅದು
ನಮ್ಮ ತಂದೆಯ ತಂದೆ ಕೊಂಡಿದ್ದು. ಆರ್ನೂರು
ರೂಪಾಯಿ ನಗದು ಹಣ ಸುರಿದು ಸರಕಾರಕ್ಕೆ
ಕೊಂಡುದಿದು. ಆದರೂ ವರುಷ ವರುಷವು ನಾವು
ಕಂದಾಯ ಕೊಡಬೇಕು ! ಆರುವರೆ ರೂಪಾಯಿ ! ”
ಇಂತೆನುತ ಕೈನೀಡಿ ತನ್ನ ನೆಲದೆಲ್ಲೆಯನು
ತೋರಿದನೆಮಗೆ ಹೆಮ್ಮೆಯಿಂದ. ಆ ಭೂಮಿಯೋ
ಬರಿಕಲ್ಲು ! ಪಾಪಾಸುಕಳ್ಳಿಯಲ್ಲದೆ ಬೇರೆ
ಪೈರುಗಳು ಹುಲುಸಾಗಿ ಬೆಳೆಯಲಾರವು ಅಲ್ಲಿ !
ಆದರಾ ರೈತನಿಗೆ, ನಾಲ್ವತ್ತು ವರುಷಗಳು
ಹಗಲಿರುಳು ಅಲ್ಲಿ ದುಡಿದಾತನಿಗೆ, ಆ ಹೊಲವು
ಇಂದ್ರವನಕೆರಡುಮಡಿ ರಮಣೀಯವಾಗಿತ್ತು !
ಏತಕೆನೆ, ಅವನ ಗೆಯ್ಮೆಯ ಕಷ್ಟದಿಂದಲ್ಲದೆ
ನೆಲದ ಗುಣದಿಂದಲ್ಲ, ಆ ಸ್ಥಲದೊಳಾತನಿಗೆ
ಹುರುಳಿ, ಜೋಳವು, ರಾಗಿ, ಹುಚ್ಚೆಳ್ಳೆ ಮೊದಲಾದ
ಧಾನ್ಯಗಳು ಕೃಪೆಯಿಂದ ಬೆಳೆದು ಉಣಿಸಿತ್ತುದನು
ಅವನು ಮರೆಯದೆ ಕೃತಜ್ಞತೆಯಿಂದ, ನೆನಹಿನಲಿ
ಅದು ಬುತ್ತಿಯಾಗಿತ್ತು. ನಮ್ಮ ಕಣ್ಣಿಗೆ ಬರಿಯ
ಬಂಜೆ ಭೂಮಿಯೆ ತೋರಿತಾದರಾತನಿಗೆ ಅದು
ಹಿಂದು ಮುಂದಿಂದುಗಳ ಹೊಟ್ಟೆ ಪಾಡಿನ ಹಿರಿಯ
ಉಗ್ರಾಣವಾಗಿತ್ತು. ಅವನ ಕಣ್ಣಿಗೆ ಅಲ್ಲಿ

ತನ್ನ ಮಕ್ಕಳ ಮುಂದಿನಭ್ಯುದಯ ಮೆರೆದಿತ್ತು;
ತನ್ನ ಹಿರಿಯವರ ಆಶೀರ್ವಾದವೆಸೆದಿತ್ತು;
ರಂಜಿಸಿತು ತನ್ನುಳಿದ ಜೀವನದ ಸಂಪತ್ತು!
ಕಲ್ಲು ನೆಲದಾ ಹೊಲದಿ ಬಿದ್ದಿದ್ದ ಒಂದೊಂದು
ಹುಡಿಯು ಆತನಿಗೆ ಸಂತಸದ ಕಿಡಿಯಾಗಿತ್ತು!—
"ಜೀವನಕೆ ನಿನಗಿದರ ಉತ್ಪತ್ತಿ ಸಾಲುವುದೆ?"
ಎಂದೆನಲು ನಿಡುಸುಯ್ದು ನುಡಿದನವನಿಂತೆಂದು:
"ಮಳೆ ನಡಸಿದರೆ ಸಾಲುವುದು, ಬುದ್ಧಿ. ಆದರೀ
ಸಾಲಿನಲಿ ಮಳೆಯಿಲ್ಲ. ಕಂದಾಯ ಕೊಡಬೇಕು.
ಕಾಲ ಮೀರಿದರೆ ಕಸುಕೊಳ್ಳುವರು ಭೂಮಿಯನೆ!
ಹೊಟ್ಟೆಬಟ್ಟೆಯ ಹಿಡಿದು, ಮಕ್ಕಳುಣಿಸನೆ ಕಡಿದು,
ಕಂದಾಯ ಕೊಡಬೇಕು. ಮಳೆ ಬರಲಿ, ಬರದಿರಲಿ,
ಬೆಳೆ ಕೊಡಲಿ, ಬೆಳೆ ಸುಡಲಿ, ಕಂದಾಯ ತಪ್ಪದಿದೆ!
ಏನುಮಾಡುವುದೆಮ್ಮ ಹಿರಿಯರಿತ್ತೀ ನೆಲವ
ತೆರಿಗೆ ಕೊಡದೆಯೆ ನಾವು ಪರರ ವಶಮಾಡಿದರೆ
ಮಕ್ಕಳಾದಪೆವೆಂತು ನಾವವರಿಗೆ? ಮುಂದೆಮಗೆ
ಒಳಿತಹುದೆ? ನಾವಿಬ್ಬರಣ್ಣತಮ್ಮದಿರಿಹೆವು.
ಅಣ್ಣನಿಗೆ ಮಗನೊಬ್ಬ; ಮದುವೆಯಾಗಿಹುದವಗೆ;
ಮಕ್ಕಳೆರಡಿವೆ; ನಿಮ್ಮ ವಯಸವಗೆ. ನನಗೊಬ್ಬ
ಮಗನಿಹನು. ಮನೆಯಲ್ಲಿ ಹೆಂಗಸರು ಬೇರಿಹರು.
ಇಷ್ಟು ಜನರಿಗೆ ಹೊಟ್ಟೆ ಬಟ್ಟೆಯೆಂದುರೆ ಎಲ್ಲಿ
ಹಣಕಾಸು? ಹೇಗೊ ಸಾಲದ ಮೇಲೆ ಬಡಬದುಕು
ಹೊರೆಯುತಿದೆ."
"ನಿನಗೆನಿತು ಸಾಲವಿದೆ?"
"ಇನ್ನೂರು!"

" ಅದನೆಂತು ತೀರಿಸುವೆ?"
" ಈಗ ಬಡ್ಡಿಯ ಕೊಟ್ಟು,
ಮುಂದೆ ಒಳ್ಳೆಯ ಕಾಲ ಬಂದಾಗ ತೀರಿಸುವೆ".
" ಎಷ್ಟು ಬಡ್ಡಿಯ ಕೊಡುವೆ ? ".
" ನೂರಕ್ಕೆ ಹದಿನೆಂಟು !"
ಇಷ್ಟರಲಿ ತನ್ನ ಕೆಲಸವ ಮುಗಿಸಿ ಬಳಿಬಂದು
ಕುಳಿತವನ ಮುಖದಲ್ಲಿ ಖಿನ್ನತೆ ಅಧೀರತೆಯ
ಚಿಹ್ನೆಗಳು ತೋರಿದುವು. ಆದರೆಮ್ಮಯ ಮುಂದೆ
ಉಲ್ಲಾಸವನೆ ತೋರಿ ನಗುವಂತೆ ನಟಿಸಿದನು.
ರೈತನಿಗೆ ನೆರವಾಗಲೆಂಬಂತೆ ಕತ್ತಲೆಯ
ಹಿರಿನೆರಳು ಬಾನಿನಿಂದಿಳಿತಂದು ಮುತ್ತಿದುದು
ಭೂಮಿಯ ಸಮಸ್ತವನು. ದೂರ ಮೈಸೂರಿನಲಿ
ಮಿಂಚಿದುವು ದೀಪಗಳು ಐಶ್ವರ್ಯಗರ್ವದಲಿ.
ಮೇಲೆ ಆಕಾಶದಲಿ ಮಿಣುಕಿದುವು ತಾರೆಗಳು
ವಿಶ್ವದೌದಾಸೀನ್ಯದಲಿ ? ಅಥವ ಶೋಕದಲಿ ?
ಕತ್ತಲಲಿ ರೈತನಾಕೃತಿಯೊಂದು ಕನಸಿನ ತೆರದಿ
ಕಾಣಿಸಿತು : ಅವನೊಂದು ವಿಶ್ವದ ಮಹಾಸ್ವಪ್ನ !
ಕಪ್ಪಾದುದನು ಕಂಡು "ಏಳಿ, ಬುದ್ದೀ, ನಿಮಗೆ
ಹೊತ್ತಾಯ್ತು, ಕತ್ತಲಲಿ ದಾರಿ ಕಾಣದು ; ಕಲ್ಲು
ಮುಳ್ಗಳಿವೆ; ಕೊರಕಲಿದೆ" ಎಂದು ರೈತನು ಹೇಳಿ
ಎದ್ದುನಿಂತೆವು, ಪ್ರಕೃತಿವಾಣಿಗವಿಧೇಯತೆಯೆ
ಅಪರಾಧವೆಂಬಂತೆ. ನಾವೆದ್ದು ನಿಲ್ಲಲವನೂ
ಮೇಲೆದ್ದು " ನಾಳೆ ಬನ್ನೀ, ಬುದ್ದಿ! ನಾನಿಲ್ಲೆ
ಕೆಲಸಮಾಡುತ ನಿಮ್ಮನೆದುರು ನೋಡುತ್ತಿರುವೆ.
ಹೊತ್ತಿನಂತೆಯೆ ಬನ್ನಿ ; ಹವವು ಚೆನ್ನಾಗಿಹುದು!"

ಎಂದು ಆಹ್ವಾನವೀಯುತಲಿರಲು ಚಲಿಸಿದೆವು
ಮನೆಯ ಕಡೆ. ಅವನೆಮ್ಮ ಒಡನೊಡನೆ ಚಲಿಸಿದನು.
ಕತ್ತಲಲಿ ನಾವು ಮೂವರು ಮಾತನಾಡುತ್ತ
ಸಾಗಿದೆವು ಬಯಲಿನಲಿ, ಮೂರು ವಾಣಿಗಳಂತೆ!
ದಾರಿಯಲಿ ರೈತನಿಗೆ ಮಲೆಯನಾಡಿನ ಕಥೆಯ
ಬಿತ್ತರಿಸಿ ಹೇಳಿದೆನು : ಅಲ್ಲಿ ಮಳೆ ಮಾರಿಮಳೆ ;
ಅಲ್ಲಿರುವ ಪರ್ವತ ಅರಣ್ಯಗಳು ಬಾನ್ನೇರಿ
ನಾಡನೆಲ್ಲವ ನುಂಗಿ ನಿಂತಿಹವು ; ಅಲ್ಲಿರುವ
ಕಬ್ಬು, ಅಡಕೆಯ ತೋಟ, ಹುಲುಸು ಬತ್ತದ ಗದ್ದೆ,
ಎಲ್ಲ ಕಾಲದೊಳೆಲ್ಲಿಯೂ ಮೆರೆವ ಬರಿ ಹಸುರು ;
ನೀರು ನಾವ್ ಕರೆದ ಕಡೆಗೈತಹುದು. ಎಲ್ಲವನು
ಕೇಳಿ, ಶಿಶು ಕಟ್ಟುಕತೆಗೆನಿತು ಬೆರಗಾಗುವುದೊ
ಅಂತಾದನಾ ರೈತ. ಆದರವನಿಗೆ ತನ್ನ
ಕಲ್ಲು ಹೊಲವಿನ್ನುಳಿದ ಸಿರಿನಾಡುಗಳಿಗಿಂತ
ಮುದ್ದಾಗಿ ತೋರಿದುದು. ಅವನೊಳಿದ್ದುದು ಬೆರಗು,
ಕರುಬಲ್ಲ.
ದಾರಿ ಕವಲುವೆಡೆ ನಮ್ಮನು ಮನೆಗೆ
ಕಳುಹಿಬಹೆನೆಂದವನು ಹಟಹಿಡಿದು ನಿಂತಿರಲು,
"ಬೇಡ ಬೇಡ್ಕೈ, ನೀನು ಗುಡಿಗೆ ನಡೆ; ಹಗಲೆಲ್ಲ
ಉಣಿಸಿಲ್ಲ, ಹಸಿದಿರುವೆ, ದುಡಿದು ನೈದಣಿದಿರುವೆ."
ಎನೆ ನಾವು ಒಲ್ಲದಾತನು ನಮ್ಮ ಸುಮ್ಮನಿಸಿ
"ಇಲ್ಲ ಬುದ್ದೀ, ನನ್ನ ಊಟಕಿನ್ನೂ ಹೊತ್ತು
ಬಹಳ ಇದೆ" ಎನುತ ನಮ್ಮನು ಕಳುಹಿದನು ಮಠಕೆ
ತುಸುದೂರವಿರುವವರೆಗೆ. ಒಂದೆ ಗಂಟೆಯ ನುಡಿಗೆ
ಅವನದೆಂತಹ ಮೈತ್ರಿ! ನಾಗರಿಕರಂತಿಹರೆ?

ಆತನು ಅನಾಗರಿಕನೆ ? ಅವನ ಆ ದುಃಖದಲಿ
ಹೆರರ ಸುಖವನು ಕಂಡು ಕುದಿವ ಕರುಬಿನಿತಿಲ್ಲ ;
ತನ್ನ ನೋವನು ಕುರಿತು ನುಡಿವಾಗ ಮಾತಿನಲಿ
ಕ್ರೋಧ ಮತ್ಸರವಿಲ್ಲ, ಕೋಪವೆಂಬುವುದಿಲ್ಲ.
ಸ್ಥಿತ ಪ್ರಜ್ಞನಿಗೆ ಸಹಜವಾಗಿಹ ಸಹಿಷ್ಣುತೆ,
ಧೀರತೆ, ಸೌಜನ್ಯಗಳು ಹುಟ್ಟುಗುಣವವಗೆ.
ನಮ್ಮೊಡನೆ ಯಾರನೂ ಆತನು ಹಳಿಯಲಿಲ್ಲ;
ಎಲ್ಲವನು ಹೇಳಿದನೆ ಹೊರತು ಖಂಡಿಸಲಿಲ್ಲ !
ನಾಗರಿಕರಂತಿಹರೆ ? ಆತನು ಅನಾಗರಿಕನೆ ?
ಇನಿಮಾತುಗಳನಾಡಿ ಕಡೆಗವನ ಬೀಳ್ಕೊಂಡು
ಬರುತಿರಲು, ನಮ್ಮೆದೆ ದುಃಖ ಸಂಮಿಶ್ರಣದ
ಸ್ಮೃತಿಯ ಮಾಧುರ್ಯದಲಿ ಗಂಭೀರವಾಗಿತ್ತು.
ಸ್ವಂತ ಸ್ವಾಂತದ ಚಿಂತೆಯ ತರಂಗಗಳ ಮಧ್ಯೆ
ನಮ್ಮಾತ್ಮಗಳು ತೇಲಿ ಮುಳುಗಿದುವು. ಮೌನದಲಿ,
ಧ್ಯಾನದಲಿ, ಬ್ರಹ್ಮಾಂಡ ಭವ್ಯ ಗಾಂಭೀರ್ಯದಲಿ,
ಚಿತ್ತಕೆ ಅತೀತವಹ ಗೂಢತರ ಶಾಂತಿಯಲಿ,
ಜಗದ ವಸ್ತುಗಳೆಲ್ಲ ಮನದಿಂದ ಜಾರುತಿರೆ
ನಡುವೆ ನಿಂತುದದೊಂದೆ ವಿಶ್ವದಾ ಶಿಶುಮೂರ್ತಿ,
ಹಸುರು ಹುಚ್ಚಿಕ್ಕೊಲದಿ ಕಂಡ ರೈತನ ಮೂರ್ತಿ !
ನಾನವಗೆ ನುಡಿದಂತೆ ಬಹುಜನಕೆ ನುಡಿದಿಲ್ಲ ;
ಅವನಿಗೆ ಕರಗಿದಂತೆ ಬಹುಜನಕೆ ಕರಗಿಲ್ಲ !

# ತೇನೆಹಕ್ಕಿ

ಜ್ಯೋತ್ಸ್ನ ತುಂಬಿ ತುಳುಕಿ ಹರಿಯೆ
ಸ್ನಿಗ್ಧ ಶರತ್ಕಾಲದಿ,
ಮುಗಿಲು ರಂಗವಲ್ಲಿ ಬರೆಯೆ
ವ್ಯೋಮ ಪಟದ ನೀಲದಿ,
ವಿಯತ್ತಳದಿ ಮೌನ ಮುದ್ರೆ
ಜಗನ್ಮುಖದಿ ಶಾಂತ ನಿದ್ರೆ
ಮೆರೆಯೆ ಕೂಗಿ ಕರೆವೆ ನೀನು,
ಮುದ್ದು ಜೊನ್ನವಕ್ಕಿಯೆ;
ಮೇಲೆ ನೋಡೆ ಬರಿಯ ಬಾನು;
ಕಾಣೆ ನೀನು ಹಕ್ಕಿಯೆ!

ದೂರ ಹಾರಿ ಕರೆವೆಯೊಮ್ಮೆ
ಸ್ವರ್ಗವಾಣಿಯಂದದಿ
ಬಳಿಗೆ ಸುಳಿದು ಉಲಿವೆಯೊಮ್ಮೆ
ಮರ್ತ್ಯವೀಣೆಯಂದದಿ.
ಏನು ಮೋಹ, ಏನು ಮಾಯೆ!
ನಿನ್ನ ಕಲೆಯ ನೆರಳ ಛಾಯೆ
ನನ್ನ ಕಲೆ, ತೇನೆ ಹಕ್ಕಿ!—
ನಿನಗೆ ಮುಕ್ತಿಯಾಗಿದೆ.—
ನುಡಿಯ ಬಲೆಯ ಸೆರೆಗೆ ಸಿಕ್ಕಿ
ನನಗೆ ದಾಸ್ಯವಾಗಿದೆ.

ತ್ಯಾಗಿಯಂತೆ ನೆಲವನುಳಿಯೆ:
ಮಮತೆ ಮರಿಯ ಗೂಡಿದು.
ಭೋಗಿಯಂತೆ ನಭವ ಹಳಿಯೆ:
ಸಿರಿಯ ತವರು ಬೀಡದು!

ಹಗಲಿನಲ್ಲಿ ನೆಲಕೆ ಸೇರಿ,
ಇರುಳಿನಲ್ಲಿ ಬಾನ್ಗೆ ಹಾರಿ
ಬಿಸಿಲು ತಂಪುಗಳನು ಮೀರಿ
ಸಮತೆಯಿಂದ ನಡೆವುದಂ
ಕಲಿಸು ನನಗೆ ಮೊದಲು ; ಕೊನೆಗೆ
ನೆಲ ಬಾನ್ಗಳ ಪಡೆವುದಂ !

# ಬಹುಮಾನ

" ಕುಹೂ! ಕುಹೂ!"—ಕೋಕಿಲವಾಣಿ!
ಜಗ ಜುಮ್ಮೆಂದುದು ಅದ ಕೇಳಿ!
ನೀರವ ಪರ್ವತ ಕಾನನ ಶ್ರೇಣಿ
ಮರುದನಿಗೈದಿತು ಮುದತಾಳಿ.—
ಗಾನವ ಕೇಳಿ ಮಹಾಂಬರ ಸುಮ್ಮನೆ
ಮಾತಾಡದೆ ಬಣ್ಣಿಸುತಿತ್ತು!
ಕಂದರದಲ್ಲಿದ್ದೊಂದು ಸರೋವರ
ತೆರೆಗಳ ಕೈಪರೆಯಿಕ್ಕಿತ್ತು!
ಮಾಧುರ್ಯದಿ ಪಿಕ ತನ್ನನೆ ಮರೆಯುತೆ
" ಕುಹೂ! ಕುಹೂ!" ಕೂಗಿತ್ತು!
ಆಲಿಸಿದೊರ್ವನು ಗಾನಕೆ ನೊಂದು
ಸೂಚನೆ ಕೊಟ್ಟನು ಇಂತೆಂದು :—
" ಮಲೆಗಳಲುಲಿಯುವ ಓ ಕೋಗಿಲೆಯೇ,
ಬಲು ಚೆಲುವಿದೆ ನಿನ್ನೀ ಗಾನ!
ಇಂಗ್ಲೀಷಿಗೆ ತರ್ಜುಮೆ ಮಾಡಿದರೆ
ದೊರೆವುದು ನೋಬೆಲ್ ಬಹುಮಾನ!
ಅರಣ್ಯ ರೋದನ! ಸುಮ್ಮನೆ ಹಾಡುವೆ!
ಕೇಳುವರಾರಿಲ್ಲಿ?"—
ಕೂಗಿತು ಕೋಗಿಲೆ " ಕುಹೂ" ಎಂದು!
ತಲ್ಲಣಿಸಿತು ಜಗ ಜುಮ್ಮೆಂದು!

# ಶೂನ್ಯತೆಯೇನಿದು ?

ಶೂನ್ಯತೆಯೇನಿದು ಹೃದಯದಲಿ
ಚೆಲ್ವಿನ ನೇಸರಿನುದಯದಲಿ ?

ಎಂದಿನ ತೆರದಿ ವಿಹಂಗಮ ಸಂಕುಲ
ಚಂದದೊಳಿಂಚರ ಗೈಯುತಲಿರಲು,
ಎಂದಿನ ತೆರದಲಿ ಹಸುರು ಹುಲ್ಲಿನಲಿ
ಮಂಜಿನ ಮಣಿಗಳು ರಂಜಿಸುತಿರಲು ;

ಎಂದಿನಂತೆ ತಂಗಾಳಿಯು ತಳಿರಲಿ
ಹಿಂದೆ ಮುಂದೆ ನಲಿದಾಡುತಲಿರಲು,
ಎಂದಿನಂತೆ ಬೆಳ್ಮುಗಿಲಿನ ಮಂದೆಯು
ಅಲ್ಲಿ ಇಲ್ಲಿ ಅಲೆದಾಡುತಲಿರಲು !

ಜಗವೆಲ್ಲವು ಆನಂದದಿ ತುಂಬಿರೆ,
ಸ್ವರ್ಗ ನಿಸರ್ಗವನಾಲಿಂಗಿಸಿರೆ,
ಸೊಬಗಿನ ಸೊದೆಯನು ಈಂಟಲು ಬಯಸಿ
ಜೀವವು ಕಾದಿದೆ ಬಲು ಸೀರಡಸಿ !

# ವಿಮರ್ಶಕ

ತಿಳಿಬಾನೆಡೆಯಲಿ ಚೆಲುವಿನ ತಿಂಗಳು
ಕಣ್ಣಿಗೆ ತಣ್ಣನೆ ಮೂಡಿದನು!
ನೋಡುತ ನಿಂತ ವಿಮರ್ಶಕನೊಬ್ಬನು
ಇಂತು ವಿಮರ್ಶೆಯ ಮಾಡಿದನು:
ಕಣ್ಣಿಗೆ ಕಾಣುವ ಬೊಮ್ಮನ ಸಿಟ್ಟಿಯೊ
ಳೀ ತಣ್ಗದಿರನೆ ಸುಂದರನು;
ಪೊನ್ಬೆಳಗನು ಸೂಸುವ ಜೊನ್ನೊಡಲನೆ
ಶಾಂತಿಯ ಕಾಂತಿಯ ಮಂದಿರನು!
ಆದರೆ ಬಿಂಬದ ಬಿತ್ತರ ಸಾಲದು!
ಏನಂದರು ಬೆಂಗದಿರನ ಹೋಲದು!
ಅಲ್ಲದೆ ನಡುವೆ ಕಳಂಕವಿದೆ!
ತಾವರೆ ಚೆಲುವಾಗಿರಲೇನಂತೆ?
ದುಂಬಿಯುದರ ಬಂಡುಣಲೇನಂತೆ?
ವಾತಾವರಣದಿ ಪಂಕವಿದೆ!
ಅಲ್ಲಿಯೆ ಪಕ್ಕದೊಳರಳುತಲಿದ್ದ
ಹೂವೊಂದಿವನ ವಿಮರ್ಶೆಯ ಕೇಳಿ
ನಕ್ಕಿತು ಬಹು ಮೃದುಹಾಸ್ಯದಲಿ!
ಅಲ್ಲಿಯೆ ಮೇಗಡೆ ಮಿಣುಕತಲಿದ್ದ
ತಾರೆಗಳೆಲ್ಲ ವಿಮರ್ಶೆಯ ಕೇಳಿ
ಕಿರುನಗೆ ಬೀರಿದುವಾಸ್ಯದಲಿ!
ಜೊನ್ನದ ಮಳೆಯೊಳು ನಲಿನಲಿದಾಡಿ
ಬಳಿ ಇರುಳ್ವಕ್ಕಿಯು ಹಾಡುತ್ತಿತ್ತು.
ಏತಕೊ ಏನೋ? ತಿಳಿಯದು ನೋಡಿ,
ನಾಯಿಯು ಕೂಡಾ ಬೊಗಳುತ್ತಿತ್ತು!

## ವಿಮರ್ಶಕ

ಕೆಲಸವಿದ್ದ ಚಳಿಗದಿರನು, ಕೇಳದೆ
ಪ್ರೌಢ ವಿಮರ್ಶೆಯ, ಮೂಡಿದನು.
ಮೂಡಿಯೆ ಮೂಡಿದನು!
ಕೆಲಸವಿಲ್ಲದ ವಿಮರ್ಶಕನಾದರೊ
ನಿಂತು ವಿಮರ್ಶೆಯ ಮಾಡಿದನು.
ಮಾಡಿಯೆ ಮಾಡಿದನು!

# ಗೂಬೆ

ಬರೆಯುತಿರೆ ಮೂಡುವುದು
ನಲ್ಗಬ್ಬವೊಮ್ಮೆ;
ಮೂಡಬಹುದಲ್ಲಲ್ಲಿ
ಬೆಳ್ಗಬ್ಬವೊಮ್ಮೆ.
ಹಾಡುತಿರೆ ಹೊಮ್ಮುವುದು
ಸವಿಯ ದನಿಯೊಮ್ಮೆ;
ನಡುವೆ ಚಿಮ್ಮಲು ಬಹುದು
ಕೀಚುದನಿಯೊಮ್ಮೆ!

ಈಶ್ವರನ ಕವನದಲಿ
ನೀನೊಂದು ತಪ್ಪು!
ಮೋಣವನ ಜಾಣ್ಮೆಯಲಿ
ನೀನೊಂದು ಬೆಪ್ಪು!

ನಿನ್ನ ಕೊರಳಿನ ಕೂಗು
ಅಶುಭವದಕಾಗಿ!
ಮೋಣೆರುಳೆ ನಿನಗಾಯ್ತು
ನಿಲಯುವದಕಾಗಿ!

ಶ್ರೀಪತಿಯ ಕೊಳಲಿನಲಿ
ನೀನಪಸ್ವರ.
ಅಜಸತಿಯ ವೀಣೆಯಲಿ
ನೀ ಕುಸ್ವರ!

ಅಂತು ನೀನೂ ಕೂಡ
ಕವನ, ಎಲೆ ಗೂಬೆ!
ಅಂತು ನೀನೂ ಕೂಡ
ಗಾನ, ಎಲೆ ಗೂಬೆ!

# ಬಂಜೆಯ ಕನಸು

ತೆರೆಬಿದ್ದು ನೊರೆಯೆದ್ದು ಭೋರ್ಗರೆವ ಕಡಲೊಂದು
ಬಿಸಿಲ ಬೆಳ್ವೆಳಗಿನಲಿ ಮಿಂಚುತಿಹುದು.
ಮುದ್ದಾದ ಮಗುವೊಂದು ಮೊರೆಮೊರೆದು ಹಿಂಜರಿವ
ಬಲ್ದೆರೆಗಳಗ್ರದಲಿ ತೇಲುತಿಹುದು!
ಕಣ್ಣರಳಿ ಮೈಯುಬ್ಬಿ ಕೆಚ್ಚಿನಿಂದೆದೆಯುಬ್ಬಿ
ಹಾರಿದಳು ಕೈಚಾಚಿ ಹೆರದ ಹೆಣ್ಣು !
ಮುಂಬರಿದು ತೇಲಿ ಕಂದನ ಹಿಡಿಯೆ, ಕೈ ತಪ್ಪಿ
ಚಿಮ್ಮುತಿದೆ ಚೆಲ್ವಿನಾ ಮುದ್ದುಗಣ್ಣು !
ಕಲ್ಪಗಳು ಮಿಂಚಿದುವು; ಬಯಕೆ ಕೈಗೂಡಲಿಲ್ಲ !
ಕಟ್ಟಕಡೆಗಪ್ಪಿದಳು ಕಂದನನು ತಾಯಿಯಾಗಿ!
ಎಚ್ಚತ್ತು ಕಣ್ದೆರೆಯೆ ಸೊಗದ ಕಂಬನಿಯೊಳಾಳ್ದ
ತಲೆದಿಂಬು ತಕ್ಕೆಯೊಳಗಿಹುದು ! ಹಾ ಬಂಜೆಗನಸೆ !

# ಕೇಶಿರಾಜ

ಶಬ್ದಮಣಿದರ್ಪಣವನೋದಿ ನಾ ಮಲಗಿದೆನು,
ಕೇಶಿರಾಜನ ಗರಡಿಯಲಿ ಕಾಳಿಗವ ಮಾಡಿ!
ಸ್ವಪ್ನಸಾಮ್ರಾಜ್ಯದಲಿ ಮೆಲು ಮೆಲನೆ ಸಂಚರಿಸಿ
ಕಳೆದ ಕಾಲದ ಮಹಾಗರ್ಭವನು ಹೊಕ್ಕು
ಮರೆತ ಶತಮಾನಗಳ ಸೋಪಾನಗಳನಿಳಿದು
ಕಲ್ಪನೆಯೆರಂಕೆಗಳ ಬಿಚ್ಚಿ ಬಡಿಯುತ ಹಾರಿ
ಮೂಕ ವಿಸ್ಮಿತನಾಗಿ ಶೂನ್ಯ ದೃಷ್ಟಿಯ ಬೀರಿ
ಭಕ್ತಿಯಲಿ, ಭಾವದಲಿ ಕೈಮುಗಿದು ನಿಂತೆ!
ಹಿರಿಯ ಮರುಭೂಮಿಯಲಿ ಬಟ್ಟೆಗೆಟ್ಟವನಂತೆ!
ಪಾಳುಬಿದ್ದಿಹ ಗುಡಿಯ ದೇವಮಂದಿರದಲ್ಲಿ
ಕಲ್ಪನೆಯ ಗಂಟೆಗಳ ನಾದವನು ಕೇಳುತ್ತ
ಕಲ್ಪನೆಯ ಮಂಗಳಾರತಿಯನವಲೋಕಿಸುತ
ವಿಗ್ರಹದ ಮುಂದೆ ನಿಲ್ಲುವ ಭಕ್ತ ಕವಿಯಂತೆ!
ಕರಿಮಣಿಯನೇಳಿಸುವ ಕತ್ತಲೆಯು ಕವಿದಿತ್ತು!
ನಿದ್ದೆಯಲಿ ಮುಳುಗಿತ್ತು ಸದ್ದಿಲ್ಲದಾ ಇರುಳು!
ಏಳು ಶತಮಾನಗಳ ಹಿಂದಿನಾ ನಟ್ಟಿರುಳು!
ಏಳ್ನೂರು ವರ್ಷಗಳ ಬಿತ್ತರದ ಬಾಂದಳವು!
ಹೊಳೆಯುತಿಹ ಚುಕ್ಕಿಗಳು! ಬೀಸುತಿಹ ತಣ್ಣೆಲರು!
ಕುಸುಮಿಸಿಹ ತರುನಿಕರ! ತಿರೆಯೆಂಬ ಮುತ್ತಜ್ಜಿ!
ಕಿವಿಗೆ ಕೇಳದ ಮೌನ ಮೊಳಗುತಿದ್ದುದು ಅಲ್ಲಿ!
ಕಣ್ಗೆ ಕಾಣದ ನೋಟ ಮೆರೆಯುತಿದ್ದುದು ಅಲ್ಲಿ!
ಆ ಮಹಾಮೌನದೇಕಾಂತದಲಿ, ಯೋಗದಲಿ
ಕುಳಿತಿರುವ ರಸಋಷಿಯ ತೆರದಿಂದೆ ರಾಜಿಸಿತು
ಸೌಂದರ್ಯ ಯೋಗಿಯೊಲು ಎಲೆವನೆಯದೊಂದು!
ಸುತ್ತಲೆಲ್ಲಿಯು ಜನರ ಸುಳಿವಿಲ್ಲ! ಬೀಡಿಲ್ಲ!

ಎಲೆವನೆಯದೊಂದೇ ಸಮಾಧಿಯಲಿ ಕುಳಿತಿತ್ತು!
ಆ ಭಯಂಕರ ನಿಶಿಯ ತಿಮಿರವನು ಮೂದಲಿಸಿ
ಮಿಣಕುತಿಹ ಚಿಣ್ಣ ಹಣತೆಯ ಸೊಡರಿನೆದುರಿನಲಿ
ಕಮಲಾಸನವನಾಂತು ಕುಳಿತ ಋಷಿಯಿವನಾರು?
ತನ್ನ ಕಾರ್ಯದಿ ತೊಡಗಿ ಕುಳಿತಿಹನು ಮೈಮರೆತು!
ಯಾವ ಜಪವಿದು? ಯಾವ ಪೂಜೆಯಿದು? ಧ್ಯಾನವಿದು?
ಹಗಲಿರುಳು ನಿದ್ದೆಯಿಲ್ಲದೆ ಮಾಳ್ಪ ಕಜ್ಜವಿದು?
ಕಂಗಳಲಿ ಹೊರಹೊಮ್ಮುತಿದೆ ಕಾಂತಿ! ಮೊಗದಲ್ಲಿ
ಗಾಂಭೀರ್ಯವುಕ್ಕುತಿದೆ! ತಿರೆಗಿರದ ತೇಜಸ್ಸು!
ಮಾನವನೊ? ದೇವತೆಯೊ? ಹೇಳಬಲ್ಲವರಾರು?
ಗ್ರಂಥಗಳ ಕಟ್ಟೇನು ರಾಶಿಯಾಗಿಹವಿಲ್ಲಿ!
ಋಷಿವರನು ಕಂಟವನು ಹಿಡಿದು ಕೈಯಲ್ಲಿ
ಬರೆಯುವನು, ಬರೆಯುವನು, ಕೊರೆಯುತಿಹನೆಡೆಬಿಡದೆ!
ಪರಮ ವೈಯಾಕರಣ! ಶಾಬ್ದಿಕಜನಮನೋಜ!
ಕವಿ ಕೇಶಿರಾಜನೆಂದರಿತು ನಾನಿನಿತಳುಕಿ
ದೂರದಲ್ಲಿಯೆ ನಿಂತು ಬಾಗಿದೆನು ಕೈಮುಗಿದು!
ವಾಗ್ದೇವಿಯವನೆದುರು ಕೈಕಟ್ಟಿ ನಿಂತಿಹಳು,
ಪಂಡಿತನ ಕರುಣೆಯನು ಬೇಡುತಿಹಳೆಂಬಂತೆ!
ಎಲೆವನೆಯ ಮೂಲೆಯಲಿ ಕುಳಿತ ಕಬ್ಬಿಗನಾರು?
ವಿಕ್ರಮಾರ್ಜುನ ವಿಜಯವನು ಬರೆದ ಪಂಪನೇ!
ಬೆದರಿ ನಿಂತಿಹನಿಲ್ಲಿ! ಇವನಾರು? ಸರಸತಿಯ
ಬೊಕ್ಕಸದ ಮುದ್ರೆಯನು ಕುಟ್ಟೊಡೆದೆನೆಂದೆಂಬ
ಹೆಮ್ಮೆಯಲಿ ಹಿಗ್ಗಿದಾ ರನ್ನನೆಂಬುವನಿವನೆ?
ವೀರಕವಿ, ಋಷಿಯೆದುರು ಬೆದರುತಿಹೆ ಏಕಿಂತು?
ಗಜಗ, ಗುಣನಂದಿ, ಮನಸಿಜನಸಗ, ಚಂದ್ರಾರ್ಯ,

ಶ್ರೀವಿಜಯ, ಗುಣವರ್ಮ, ನೇಮಿಚಂದ್ರ, ಹೊನ್ನ,
ಹಂಸರಾಜ, ಬ್ರಹ್ಮಶಿವ, ನಾಗಚಂದ್ರ,
ಜನ್ನ ಮೇಣಾ ನಾಗವರ್ಮರೇಕಿಹರಿಂತು
ನ್ಯಾಯಾಧಿಪತಿಯೆದುರು ಭಯದಿಂದ ಕಂಗೆಟ್ಟು
ಮಿಳ್ಮಿಳನೆ ನೋಡುವಪರಾಧಿಗಳ ತೆರದಿ?
ಕಬ್ಬಿಗರೆ, ನೀವೆಸಗಿದಪರಾಧವೇನು?
ಮಾತಿಲ್ಲ! ಗುಡುಗಿದಾ ಪಂಪನಿಗೆ ಕೊರಳಿಲ್ಲ!
ಸಿಡಿಲಿನೊಲು ಗರ್ಜಿಸಿದ ರನ್ನನಿಗೆ ದನಿಯಿಲ್ಲ!
ಋಷಿಯ ಕಂಠದೊಳೇನು ಸಂಕೋಲೆಗಳ ಹಾರ!
ನಿಯಮಗಳು! ಸೂತ್ರಗಳು! ಕಂದಗಳ ಕಟ್ಟು!
ಗಮಕಜಟಿಕುಳಗಳವು! ಸಂಧಿಯದು! ಲಿಂಗವವು!
ಶಿಥಿಲತ್ವ ಯತಿನಿಯಮವವ್ಯಯಗಳೆಂಬುವವು!
ಧರ್ಮಾಧಿಕಾರಿಯೇ, ಕೇಶಿರಾಜನೆ, ನಮೋ!
ಕೈಮುಗಿವೆನೆಲೆವನೆಯೆ! ನಮಿಸುವೆನು, ಎಲೆ ಸೊಡರೆ!
ಕೇಶಿರಾಜನೆ, ನಿನಗೆ ದೂರದಿಂದಲೆ ಬಾಗಿ
ತೊಲಗುವೆನು! ಬಳಿಯೊಳಿಹ ಕಬ್ಬಿಗರ ಕನಿಕರಿಸು!
ನಿಯಮಗಳ ಜಾಲದಲಿ ನಾನೆಲ್ಲಿ ಸಿಲುಕುವೆನೊ
ಎಂದಳುಕಿ ಎದೆನಡುಗಿ ಹಿಂಜರಿದು ನಿಂತೆ!
ಆದೊಡೆಯು ಋಷಿವರನ ಸಿಟ್ಟಿಸುತ, ದಿಟ್ಟಿಸುತ,
ಎವೆಯಿಕ್ಕದಲೆ ನೋಡಿ ಮರಮರಳಿ ಬಾಗಿದೆನು.
ವ್ಯಾಕರಣವಂ ಪಾಡಿ ಬೀಸಿತಲ್ಲಿಯ ಗಾಳಿ!
ವ್ಯಾಕರಣವಂ ಮೆರೆದು ಹೊಳೆದುವಲ್ಲಿಯ ತಾರೆ!
ಕತ್ತಲೆಯು ಕೂಡ ವ್ಯಾಕರಣವಂ ಬೆಳಗಿತ್ತು!
ಅರಳುತಿಹ ಹೂವುಗಳು ಸೂತ್ರಗಳ ಹೇಳಿದುವು!
ನನ್ನಡಿಯೊಳಿಹ ತಿರೆಯು ಕಂದಗಳ ಹಾಡಿದಳು!

ವ್ಯಾಕರಣ ಸಾಮ್ರಾಜ್ಯವದು ಭಯಂಕರವಾಯ್ತು !
ಕುರುಸೇನೆಯಂ ಕಂಡ ಉತ್ತರ ಕುಮಾರನೊಲು
ಕಾಲು ಕಿತ್ತೋಡಿದೆನು ! ಓಡಿದೆನು ಮೈಬೆಮರಿ !
ಹಿಡಿದು ನಿಲ್ಲಿಸಲೆನ್ನ ಪಾರ್ಥನಲ್ಲಿರಲಿಲ್ಲ !
ಹಿಂದಾರೊ ಚೀರಿದರು ! ಹಿಂತಿರುಗಿ ನೋಡೆ,
ಕವಿತೆಯೆಂಬುವ ತರಳೆ ಬರುತಿರ್ದಳೆನ್ನೆಡೆಗೆ
ಭೀತಿಯಿಂದೋಡುತ್ತ ! ಅವಳ ಹಿಂಬಾಲಿಸುತ
ಕಿತ್ತ ಕೂರಸಿಯಾಂತು ಸಂಧಿ ಸೂತ್ರಾದಿಗಳು
" ನಿಲ್ಲು ನಿಲ್ಲೆಲೆ ತೊತ್ತೆ " ಎನ್ನುತಾರ್ಭಟಿಸಿ
ನುಗ್ಗಿದರು ! ನಡುಗಿದೆನು ಕೈಲಾಗದವನಂತೆ !
ಕತ್ತಲಲಿ ಕಪ್ಪೆಯೆಡವಿದ ಹುಡುಗಿಯಂತೆ !
ಸೂತ್ರಗಳು ಕಬ್ಬವೆಣ್ಣನು ಹಿಡಿದು ಕಟ್ಟಿದುವು ;
ಹೃದಯದಲಿ ಕೆಚ್ಚುದಿಸಿ ನನ್ನಿನಿಯಳನು ಬಿಡಿಸೆ
ಮಾರಾಂತು ಕಡಗಿದೆನು ! ಕದನ ಭೀಕರವಾಯ್ತು !
ಸೂತ್ರಗಳ ಕೂರಸಿಗಳೆನ್ನೆದೆಯ ಚುಚ್ಚಿದುವು !
ಕಂದಗಳ ಬಾಣಗಳು ಕಿಕ್ಕಿರಿದು ಮುಚ್ಚಿದುವು !
ಸಂಧಿಗಳು ಸುತ್ತಿದುವು ! ತತ್ಸಮಗಳಾವರಿಸಿ
ನೆತ್ತರನು ಹೀರಿದುವು ! ಕೋಪದಲಿ ಮೇಲ್ವಾಯ್ದು
ಬಡಿದಿರಿದು ಕೆಡಹಿದುವು ತದ್ಭವಗಳಾಳಿ !
ಜಟಿಕುಳಗಳೆಂಬ ಕಾಲಾಳುಗಳು ತೇರ್ವೈಸಿ
ಮೆಟ್ಟಿದುವು ! ಮೂರ್ಛೆಯಲಿ ನೆಲಕುರುಳಿ ಬಿದ್ದೆ !
ಕಣ್ದೆರೆದೆ; ಕನಸೊಡೆದು ಪುಡಿಯಾಯ್ತು ! ಆದೊಡಂ
ತಲ್ಲಣಿಸಿತೆನ್ನೆದೆಯು ಘೋರಸಮರವ ನೆನೆದು !
ಶಬ್ದಮಣಿದರ್ಪಣವ ನಿದ್ದೆಹೋಗುವ ಮುನ್ನ
ನಾನಿನ್ನು ಮುಂದೆಂದು ನೋಡುವುದೆ ಇಲ್ಲೆಂದು
ಭೀಮನಂದದಿ ಪೂಣ್ದೊದರಿ ಶಯನದಿಂದೆದ್ದೆ !

# ಕಾಮದೇವ

ಓ ರತಿಪತಿಯೇ,

ಹರಿ ನಿನ್ನನು ಪಡೆದನು ಎಂದು
ತಿಳಿದಿದ್ದುವು ಶಾಸ್ತ್ರಗಳಂದು,
ಆ ಹರಿಯನೆ ನೀ ಪಡೆದಿಹೆ ಎಂದು
ಹೇಳುತ್ತಿವೆ ಶಾಸ್ತ್ರಗಳಿಂದು!
ಮತಧರ್ಮವು ನೀತಿಗಳೆಲ್ಲ
ನಿನ್ನಯ ವೈದೋರಿಕೆಯಂತೆ.
ಗಾಯನ ಕವನ ಕಲೋಪಾಸನೆಯೆಲ್ಲಾ
ವೇಷಧರಿಸಿರುವ ನೀನಂತೆ!

ಓ ರತಿಪತಿಯೇ,

ಈಶ್ವರಗೀಶ್ವರ ನೀನಂತೆ!
ಕಾಮನೆ, ನಿನ್ನನು ಹಿಡಿದವರೆಲ್ಲ
ಸೋತು ನಿನಗೆ ಶರಣಾದವರಂತೆ;
ಒಲ್ಲದೆ ನಿನ್ನನು ಬಿಟ್ಟವರೆಲ್ಲ
ಸೋಲನೊಪ್ಪದಿಹ ಕಪಟಿಗಳಂತೆ!
ಸೋತರದಂತೂ ಸೋಲಂತೆ;
ಗೆದ್ದರೆ! ಅದು ಜಯವಲ್ಲಂತೆ!

ಓ ರತಿಪತಿಯೇ,

ನಿನ್ನ ಪೂಜಕರ ವಾದವ ಗೆಲುವುದು
ನಿನ್ನನು ಗೆದ್ದುದಕ್ಕೈಮಡಿಯು!
ಸೋತರು ಸೋಲು, ಗೆದ್ದರು ಸೋಲು!
ಸುಮ್ಮನಿರುವುದೇ ಬಲು ಮೇಲು!

ಕಾಮನಿಗಿಂತಲು ಕಾಮವಾದಿಗಳೆ
ಮೋಹಿಸುವುದರಲಿ ಗಟ್ಟಿಗರು.
ಕಾಮನಿಗಿದ್ದಾ ಐದು ಬಾಣಗಳು
ಸಾಲದಿವರುಗಳು ಹುಟ್ಟಿದರು!

## ಕಾಮದೇವ

ತಾಯಿಯ ಮಗುವಿನ ನೇಹದ ಹಿಂಗಡೆ
ಕಾಮದ ಬೇರಂತೆ;
ಅಣ್ಣತಂಗಿಯರ ಮೈತ್ರಿಯ ಬೆನ್ನಲಿ
ಕಾಮದ ಕಣ್ಣಂತೆ;
ಮಿತ್ರರಿಗಿರುವಾ ಸ್ನೇಹದ ಹೃದಯದಿ
ಕಾಮದ ಮನೆಯಂತೆ;
ಚೆಲುವನು ಕಂಡರೆ ಹಿಗ್ಗುವರೆದೆಯಲಿ
ಕಾಮದ ಮೊನೆಯಂತೆ.

ರಾವಣ ವಧೆಯೂ ಕಾಮನ ಚೇಷ್ಟೆ!
ಭೀಮನ ಗದೆಯೂ ಕಾಮನ ಚೇಷ್ಟೆ!
ರಾಮಾಯಣ ವಾಲ್ಮೀಕಿಯ ಕಾಮ!
ಭಾರತವೆಂಬುದು ವ್ಯಾಸನ ಕಾಮ!
ಶಿಲುಬೆಗೆ ಏರಿದ ಕ್ರಿಸ್ತನ ಆತ್ಮದ
ಸ್ಥೈರ್ಯವು ಕಾಮನ ಕಿಚ್ಚಂತೆ!
ರಾಜ್ಯವ ತ್ಯಜಿಸಿದ ಬುದ್ಧನ ತ್ಯಾಗದ
ಧೈರ್ಯವು ಕಾಮನ ಕೆಚ್ಚಂತೆ!
ಇದು ದಿಟವಾದರೆ ಹೆಸರಿಂದೇನು?
ರಾಮನ "ಕಾಮ" ಎಂದರೆ ಏನು?

# ದುಃಖ ಧ್ವನಿ

ಬಂದ ದುಃಖದ ನೆನಪು ಹಿಂದೆ,
ಬರುವ ದುಃಖದ ಭಯವು ಮುಂದೆ,
ನಡುವೆ ಇಂದಿಹ ದುಃಖ ಪೀಠದಿ
ನೆಗಹಿ ಗಗನಕೆ ಮುಖವನು
ಹಾರುತಿರುವೆನು ಕಾಳಕೂಟದಿ
ಕಾಣಲಮೃತದ ಸುಖವನು.

ತಲೆಯ ಮೇಗಡೆ ಮುಳ್ಳುಮುಡಿಯಿದೆ,
ನೊಂದ ಕೊರಳಲಿ ನರಳು ನುಡಿಯಿದೆ,
ಹಿಡಿದ ವೀಣೆಯು ತಂತಿ ಮಿಡಿದರೆ
ಹೊಮ್ಮುತಿದೆ ಬರಿ ರೋದನ!
ದುಃಖ ದುಃಖದ ನಡುವೆ ಮಡಿದರೆ,
ಶವವೆ ಸುಖದ ನವೋದನ!

ನೀಲಿ ಬಾನಿಗೆ ಮುಗಿದು ಕೈಯನು,
ಧರೆಯ ಧೂಲಿಯೊಳುರುಳಿ ಮೈಯನು,
ಪರಮ ಕರುಣಾಶಾಲಿ ದರ್ಶನ
ಕೊಟ್ಟು ಕಾಯುವನೆಂದಿರೆ,
ಮೃತ್ಯುಶೀತಲ ಹಸ್ತ ಸ್ಪರ್ಶನ
ವರದಿನಳಿವುದು ತೊಂದರೆ!

# ಆರ್ತವಾಣಿ

ಸೋತುಬಂದೆನೊ, ಗುರುವೆ, ನಿನ್ನ ಬಳಿಗೆ!
ಸೋತ ಜೀವವನಾತುಕೋ ಒಂದು ಗಳಿಗೆ!

ಅರಿಯ ಹಿರಿಸರಳು ಮರುಮೊನೆಗೊಂಡ ಗಾಯದಲಿ
ಸುರಿಯುತಿದೆ ತೊರೆಯಂತೆ ಬಿಸಿನೆತ್ತರು;
ಗಿರುಗಿರನೆ ಗಾಳಿಯಲಿ ತಿರುಗುತಿಹ ಸರಳಗರಿ
ಕೊರೆಯುತಿಹುದೆದೆಯಲ್ಲಿ ಉರಿಹೊತ್ತಿಸಿ!

ಎತ್ತ ನೋಡಿದರೆನಗೆ ಆಶ್ರಯವೆ ತೋರದಿದೆ;
ಇತ್ತು ಕೃಪೆಯಾಶ್ರಮದಿ ತಾವನೆನಗೆ
ಹೆತ್ತ ಕಂದನ ಬಗೆಯು ಹೊತ್ತು ದುಗುಡವ ಹರಿಸಿ
ಮತ್ತೆ ನನ್ನನು ಕಳುಹೊ ರಣರಂಗಕೆ!

ಗೌರವ ರಣಾಂಗಣದಿನಳುಕಿ ಬಂದವನಲ್ಲ,
ಪೌರುಷ ವಿಹೀನತೆಯ ಪಾಪಿಯಲ್ಲ;
ಘೋರ ಸಂಗ್ರಾಮದಿಂ ಬಿಡುತೆ ಬೇಡುವನಲ್ಲ,
ವೈರಿಯನು ಗೆಲ್ಲದೈತರುವನಲ್ಲ!

# ಶರಣು ಹೋಗುವುದೆ ಲೇಸು

ಶರಣು ಹೋಗುವುದೆ ಲೇಸು ;
ಕಾದಿ ಗೆಲಲರಿಯೆ !
ಪಡೆದು ನಲಿವುದೆ ಲೇಸು ;
ತೊರೆದುರಿಯಲರಿಯೆ !

ಗೆಲವು ಬಹುದೂರವಿರೆ,
ಹೊಂಚುತಿರೆ ಸೋಲು,
ಗೆಲುವ ಬೇನೆಯದೇಕೆ ?
ಸೋತ ಸೊಗ ಮೇಲು !

ಬೇಕಿಹುದು ನನಗೆ, ಜಯ-
ದಭಿಮಾನವಲ್ಲ ;
ಗೆಲವೊ ? ಸೋಲೋ ? ನನಗೆ
ಸುಖವೊಂದೆ ಗೆಲ್ಲ !

# ಸಂಸ್ಕೃತ ಮಾತೆ

ಪೃಥಿವಿಯಾ ಪ್ರಥಮ ಪ್ರಭಾತದಲಿ, ಇತಿಹಾಸ
ದೃಷ್ಟಿಗಸ್ಪಷ್ಟ ಅಜ್ಞಾತ ಪ್ರಾಚೀನದಲಿ,
ಚಿರಧವಲ ಹಿಮಶೈಲ ಪೃಥುಲೋರು ಪ್ರೇಂಖದಲಿ
ನವಜಾತ ಶಿಶುವಾಗಿ ನಲಿದ ಮಂಗಲಮಯಿಾ
ಆರ್ಯಮಾತೆಯು ಮೊದಲ ತೊದಲ ನಾಗರಿಕತೆಯ
ಸಾಮಗಾನದ ವಾಣಿಯಿಂದೆ ಮೂಡಿದ ಮೂರ್ತಿ
ನೀನೆಲಾ, ಸಂಸ್ಕೃತದ ವಾಗ್ದೇವಿ! ಮಾನವನು
ವನ ಭವನದಲಿ ಮೊದಲು ಬಾನೆಡೆಗೆ ಮೊಗವೆತ್ತಿ
ಕೈಮುಗಿದು ದೇವನಾಶೀರ್ವಾದವನೆ ಬಯಸಿ
ವೇದದಲಿ ಪ್ರಾರ್ಥಿಸಿದ ದನಿ ನಿನ್ನದೆಲೆ ತಾಯೆ!
ಉಪನಿಷತ್ತಿನಲಿ ಋಷಿಗಳು ನಿನ್ನನಾಶ್ರಯಿಸಿ
ತಮ್ಮ ಮಹದಾಲೋಚನಾ ಮಂಜರಿಯ ನೆಯ್ದು
ಏಕಮೇವಾದ್ವಿತೀಯಂ ಬ್ರಹ್ಮವನು ಸಾರಿ,
'ತತ್ತ್ವಮಸಿ,' 'ಬ್ರಹ್ಮಾಸ್ಮಿ,' 'ಸೋಹಮೆ'ಂಬುವ ಮಂತ್ರ
ತೂರ್ಯದಲಿ ಶಿಶುನರಗೆ ಅಭಯಮತವನು ಹೇಳಿ
ಜ್ಯೋತಿದರ್ಶನವಿತ್ತರಲ್ತೆ, ಹೇ ಗಾಯತ್ರಿ!
ಮೈತ್ರೇಯಿ ಯಾಜ್ಞವಲ್ಕ್ಯಾದಿಗಳು ತವಸ್ತನ್ಯ
ಪೀಯೂಷ ಪಾನದಿಂ ಮೃತ್ಯುವನೆ ಉತ್ತರಿಸಿ
ಅಮೃತರಾಗಿಹರಲ್ತೆ? ವ್ಯಾಸ ವಾಲ್ಮೀಕಿಗಳು
ಮೃದು ಮಧುರ ಧೀರ ಗಂಭೀರ ತವ ವಾಣಿಯಿಂ
ಕಾವ್ಯಕಾಹಿನಿಯ ರಸವಾಹಿನಿಯ ಸ್ರೋತದಲಿ
ಜನಗಣದ ಹೃದಯ ದುಃಖದ ತಾಪ ಪಾಪಗಳ
ತವಿಸುತಾನಂದವರ್ಷವ ಕರೆದು ಲೋಕದಲಿ
ಸ್ವರ್ಗಸ್ವಪ್ನದ ನಂದನೋದ್ಯಾನವನು ಸೃಜಿಸಿ
ಕವಿಕುಲ ಶಿರೋಮಣಿಗಳಾಗಿ ರಂಜಿಪರಲ್ತೆ?

ಕಾಳಿದಾಸಾದಿಗಳು, ಭಾಸ ಭವಭೂತಿಗಳು,
ಜ್ಞಾನಿ, ವೈಯಾಕರಣ, ರಸಋಷಿ, ವಿಭೂತಿಗಳು
ನಿನ್ನ ನಿರ್ಜರ ನಿರ್ಝರಿಣಿಯಲ್ಲಿ ಕ್ರೀಡಿಸುವ
ಕವಿ ಶಿಶುಗಳಾಗಿಹರು!
ಆರ್ಯರಾಗಿಹ ನಾವು
ನಿನ್ನ ಮೊಲೆವಾಲ ಸವಿಯಿಲ್ಲದೆಯೆ ಬದುಕುವೆವೆ?
ನೀನಿಲ್ಲದೆಲ್ಲಿಯದು ಭರತಖಂಡದ ಬದುಕು,
ಸಂಪತ್ತು, ಸಂಸ್ಕೃತಿ? ನಮ್ಮ ಜೀವನ ಗಂಗೆ
ನಿನ್ನೆದೆಯ ಅಕ್ಷಯ ಹಿಮಾಲಯವು ಸರ್ವದಾ
ದಾನಮಾಡುವ ಪುಣ್ಯಜಲ ತೀರ್ಥದಿಂದಲ್ತೆ
ಬತ್ತದೆಯೆ ತುಂಬಿ ನೂತನವಾಗಿ ಚಿರವಾಗಿ
ಹರಿಯುತಿದೆ?
ಹೇ ದಿವ್ಯ ಸಂಸ್ಕೃತ ಹಿಮಾಚಲವೆ,
ಗಗನಚುಂಬಿತವಾಗಿ ಬೆಳೆದು ನೀ ನಿಂತಿರುವೆ;
ಸ್ಥಿರತೆಯದು ಸಾವಲ್ಲ, ಜೀವಿತ ಚರಮ ಲಕ್ಷ್ಯ!
ಬೆಳೆಯುತಿಹ ನಿನ್ನೀ ಹಸುಳೆಗಳಿಗೆ ತಾವ ಕೊಡು;
ಹರಕೆಗೈ; ಸ್ತನ್ಯಪಾನವ ನೀಡು, ಹೇ ಜನನಿ!
ಹಸಿದ ಹಸುಳೆಯ ಕೈಯ ಅಶನವನು ಕಸಿಯುವುದು
ಹಿರಿಯ ಸಂಸ್ಕೃತಿ ಪಡೆದ ಸಂಸ್ಕೃತ ಮಹೀಯಸಿಗೆ
ಗೌರವದ ಕುರುಹಲ್ಲ! ತಾಯಿ ಮಗುವಿಗೆ ಕರುಬಿ
ವೈಯಾರಿಯಾಗುವುದು, ಅಯ್ಯೊ, ಲಕ್ಷಣವಲ್ಲ!
ಮಗು ಬೆಳೆಯಲೆಳಸುವುದು ಜನನಿಯ ಮರಣಕಲ್ಲ!
ಜನನಿಗದು ಅಭಿಮಾನ, ತೇಜಸ್ಸು, ಶ್ರೇಯಸ್ಸು!
ಸಂಪ್ರದಾಯದ ಆರ್ಯೆ, ನಿನಗೇಕೆ ತರಳೆಯರ
ಈ ನವ ನವೀನ ಪರಸಂಸ್ಕೃತಿಯ ಅನುಕರಣ
ಲೋಲುಪತೆ? ಅದು ನಮಗಿರಲಿ ಬಿಡು, ಜಗದ್ವಂದ್ಯೆ!

# ಜಯಾಪಜಯಗಳು

ಇಂದು ಜಯಿಸುವೆ ನಾಳೆ ಜಯಿಸುವೆ
ಎಂದು ಭರವಸೆಯಿಟ್ಟು ನಿನ್ನೊಳು,
ಕದನವಾಡಿದೆನು!
ಇಂದು ನಾಳೆಗಳೆಲ್ಲ ಸಂದುವು
ಬಂದಿತಂತಿಮಕಾಲವಾದರು
ಕದನ ಮುಗಿಯದಿದೆ!

ಅರಿಗಳನುಪಮವೀರರೆಂಬುದ-
ನರಿಯದೆ ಸಹಾಯವನುಪೇಕ್ಷಿಸಿ
ಬರಿದೆ ಹೋರಿದೆನು.
ಕೆಲರ ಜಯಿಸಿದೆ; ಕೆಲರ ಪಳಗಿಸು-
ತುಳಿದವರ ಬಲವಮಿತವಾಗಲು
ಧರೆಯ ಚುಂಬಿಸಿದೆ!

ಬೀಳುತೇಳುತ ಧೈರ್ಯಗುಂದದೆ
ಬೀಳಹೊಯ್ದೆನು ಶತ್ರು ಸುಭಟರ-
ನಾದರುಳಿದಿಹರು;
ಹೀನವಾಗುತಲಿಹುದು ಬಲುಮೆಯು
ದೀನನಾಗಿಹೆ ನಾನು, ಜನನಿಯೆ,
ಕಾದು ಬಳಲಿಹೆನು.

ಒಮ್ಮೆ ನಿನ್ನಯ ಕೃಪೆಯ ತೋರೌ;
ಒಮ್ಮೆ ನಿನ್ನಯ ಬಲವ ನೀಡೌ;
ಸದೆವೆ ಶತ್ರುಗಳ!
ಬಲುಮೆಯುಳಿಯಲು ನಿನ್ನ ಬೇಡುವೆ;
ಒಲುಮೆಯೇ ಹಿರಿಬಲುಮೆ, ತಾಯೇ,
ಕದನರಂಗದಲಿ!

# ನವೀನ

ನಾಡಿನ ಪುಣ್ಯದ ಪೂರ್ವದಿಗಂತದಿ
ನವ ಅರುಣೋದಯ ಹೊಮ್ಮುತಿದೆ!
ಚಿರ ನೂತನ ಚೇತನದುತ್ಸಾಹದಿ
ನವೀನ ಜೀವನ ಚಿಮ್ಮುತಿದೆ!
ಅಭಿನವ ಮಧುಕೋಕಿಲ ಕಲಕಂಠದಿ
ಸ್ವರ ಸುರಚಾಪಗಳುಣ್ಮುತಿವೆ!
ಶ್ಯಾಮಲ ಕಾನನ ಸುಮಸಮ್ಮೇಲದಿ
ಇಂಚರ ಸಾಸಿರ ಪೊಣ್ಮುತಿವೆ!
ಕಿವಿ ಕಣ್ಣಾಗುತಿದೆ!
ಕಣ್ ಕಿವಿಯಾಗುತಿದೆ!

ಭೂಮವ್ಯೋಮದ ನೀಲಾಂಗಣದಲಿ
ಕೆಂದೆರೆಮುಗಿಲಿನ ರಂಗೋಲಿ
ರಂಜಿಸುತಿದೆ ಹೊಳೆ ತೆರೆಯುಚ್ಚೊತ್ತಿದ
ಕೆಂಪನೆ ನುಣ್ಮಳಲನು ಹೋಲಿ!
ಹಿಮಮಣಿ ಸಿಂಚಿತ ತೃಣವಿಸ್ತಾರದಿ
ನೇಸರು ಕಿಡಿಬಲೆ ನೆಯ್ಯುತಿದೆ;
ವಿಹಂಗ ದಂಪತಿ ತರುಶಾಖಾಗ್ರದಿ
ಪ್ರೇಮಾಲಾಪನೆ ಗೈಯುತಿದೆ.
ನವೀನ ಹೃದಯಗಳೇಳಿ,
ನವೀನ ಗಾನವ ಕೇಳಿ!
ನಾಡಿನ ಪುಣ್ಯದ ಪೂರ್ವದಿಗಂತದಿ
ನವ ಅರುಣೋದಯ ಹೊಮ್ಮುತಿದೆ!
ಚಿರ ನೂತನ ಚೇತನದುತ್ಸಾಹದಿ
ನವೀನ ಜೀವನ ಚಿಮ್ಮುತಿದೆ!

## ಮೊದಲ ಚರಣಗಳು

## ಮೊದಲ ಚರಣಗಳು



# ನವಿಲು : ಕಲಾಸುಂದರಿ

ಈ ಹಿಂದೆ ಎರಡು ಭಾಗಗಳಲ್ಲಿ ಪ್ರಸಿದ್ಧವಾಗಿದ್ದ 'ನವಿಲು' ಕವನ ಈಗ 'ನವಿಲು' ಮತ್ತು 'ಕಲಾಸುಂದರಿ' ಎಂಬ ಎರಡು ಪ್ರತ್ಯೇಕ ಪುಸ್ತಕಗಳ[illegible] ಪ್ರಕಟವಾಗಿವೆ. ಈ ಸಂಗ್ರಹದಲ್ಲಿ ಹಲವು ಬದಲಾವಣೆಗಳನ್ನು ಮಾಡಲು ಈ ಸಂದರ್ಭವನ್ನು ಉಪಯೋಗಿಸಿಕೊಂಡಿದೆ. ಹಿಂದಿನ ಸಂಪುಟಗಳಲ್ಲಿ ಕಂಡುಬರು ತ್ತಿದ್ದ ಮಕ್ಕಳ ಪದ್ಯಗಳೂ, ಪ್ರೇಮಗೀತಗಳೂ, ಸಾನೆಟ್‌ಗಳೂ, ಇಲ್ಲಿ ಇಲ್ಲ. ಅವು ಬೇರೆ ಬೇರೆ ಸಂಗ್ರಹಗಳನ್ನು ಸೇರಿಕೊಂಡಿವೆ. ಉಳಿದ ಕವನಗಳನ್ನೂ ಪೂರ್ಣ ಯಾಗಿ [illegible] ಮಾಡಿಸಿ ಕವಿತೆಗಳ ಜೋಡಣೆಯ ಕ್ರಮದಲ್ಲಿ ಬದಲಾವಣೆಯನ್ನು [illegible] ಇದರಿಂದ ವೈವಿಧ್ಯಕ್ಕೆ ಕುಂದುಂಟಾಗದಂತೆ, ಸಾಧ್ಯವಾದಮಟ್ಟಿಗೂ [illegible]ನಾನರಸ ಭಾವಗಳುಳ್ಳ ಕವನಗಳು ಒಂದೆಡೆ ಬರುವಂತೆ ನೋಡಿಕೊಳ್ಳ[illegible] [illegible]ಡು ಸಂಪುಟಗಳೂ ಸುಂದರವಾದ ಚಿತ್ರದ ಹೊದಿಕೆಯಿಂದ ಕೂಡಿವೆ. [illegible]ಮಾರ್ಪಾಡುಗಳಿಂದ ಈ ಕವಿತಾ ಸಂಗ್ರಹಗಳು ಓದುಗರಿಗೆ ಹೆಚ್ಚು [illegible] ಪ್ರಕಾಶಕರೂ ನಂಬಿದ್ದಾರೆ.

ನವಿಲು : ರೂ. ೧-೪-೦ **ಕಲಾಸುಂದರಿ : ರೂ. ೧-೮-೦**

---

* ನ್ವೈಸೂ...